ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

**ಕ**ಳೆದ ಆರು ದಶಕಗಳಿಂದ ಸಂದೇಶ ಪ್ರಚಾರ, ಇಸ್ಲಾಮೀ ಸಮಾಜ ನಿರ್ಮಾಣ ಗೂ ಸಮಾಜ ಸೇವಾ ಕಾರ್ಯಗಳಲ್ಲಿ ನಿರತವಾಗಿರುವ ಜಮಾಅತೆ ಇಸ್ಲಾಮಿಯು ಇಂದು ದೇಶದಲ್ಲಿ ಅಜ್ಞಾತವಾಗಿ ಉಳಿದಿಲ್ಲ. ಆದರೆ ಅದರ ಸಮಗ್ರ ಪರಿಚಯವು ಒಂದು ಿತ ವಲಯಕ್ಕಷ್ಟೇ ಆಗಿದೆ. ಜಮಾಅತೆ ಇಸ್ಲಾಮಿಯ ಕುರಿತು ಅನೇಕ ತಪ್ಪು ಕಲ್ಪನೆಗಳು ಶ ಬಾಂಧವರಲ್ಲಿದೆ. ಮಾತ್ರವಲ್ಲ ಮುಸ್ಲಿಮ್ ಸಮುದಾಯದೊಳಗೂ ಜಮಾಅತ್‌ನ ತು ಅನೇಕ ರೀತಿಯ ತಪ್ಪು ಭಾವನೆಗಳನ್ನು ಸೃಷ್ಟಿಸಲಾಗುತ್ತಿದೆ.

ಜಮಾಅತೆ ಇಸ್ಲಾಮಿಯು ಒಂದು ಅಪ್ಪಟ ಧಾರ್ಮಿಕ ಸಂಘಟನೆಯಾಗಿದ್ದು ಅದಕ್ಕೆ ದೇಶದ ಆಗು-ಹೋಗುಗಳೊಂದಿಗಾಗಲೀ ರಾಜಕೀಯದೊಂದಿಗಾಗಲೀ ಯಾವುದೇ ಂಧವಿಲ್ಲವೆಂದು ಕೆಲವರು ಭಾವಿಸಿದರೆ, ಅದೊಂದು ಧಾರ್ಮಿಕ ವೇಷ ಧರಿಸಿ ರಾಜಕೀಯ ಯವನ್ನಿಟ್ಟುಕೊಂಡು ಈ ದೇಶದಲ್ಲಿ ಕೆಲಸ ಮಾಡುವ ಸಂಘಟನೆಯಾಗಿದೆಯೆಂದೂ ಕಾರ ಮಾಡಲಾಗುತ್ತಿದೆ.

ವಾಸ್ತವದಲ್ಲಿ ಜಮಾಅತೆ ಇಸ್ಲಾಮಿಯು ಯಾವುದೇ ಲೌಕಿಕ ಉದ್ದೇಶವನ್ನಿಟ್ಟು ರ್ಯ ರಂಗಕ್ಕಿಳಿದ ಸಂಘಟನೆಯಲ್ಲ. ಪ್ರಪಂಚದ ಸೃಷ್ಟಿಕರ್ತನಾದ ದೇವನ ಸಂದೇಶವನ್ನು ವನ ದಾಸರಿಗೆ ತಲಪಿಸುವ ಪ್ರವಾದಿಗಳ ಘನ ಜವಾಬ್ದಾರಿಕೆಯನ್ನು ವಹಿಸಿ ಕಾರ್ಯ ವೃತ್ತವಾಗಿರುವ ಸಂಘಟನೆಯಾಗಿದೆ. ಅದರ ಪ್ರೇರಕ ಶಕ್ತಿ ಕೇವಲ ಅಲ್ಲಾಹನ ಸಂಪ್ರೀತಿ ಷ್ಟು ಪರಲೋಕ ಮೋಕ್ಷವಾಗಿದೆ.

ಈ ನಿಟ್ಟಿನಲ್ಲಿ ಜಮಾಅತೆ ಇಸ್ಲಾಮಿಯ ಸ್ಥಾಪನೆಯ ಹಿನ್ನೆಲೆ, ಅದರ ಬೆಳವಣಿಗೆ ಗೂ ಅದರ ಚಟುವಟಿಕೆಗಳ ಒಂದು ಸಂಕ್ಷಿಪ್ತ ಪರಿಚಯವನ್ನು ಈ ಪುಸ್ತಕದ ಮೂಲಕ ಡಿಸಲು ಪ್ರಯತ್ನಿಸಲಾಗಿದೆ.

ಕೇರಳದ 'ಇಸ್ಲಾಮಿಕ್ ಪಬ್ಲಿಷಿಂಗ್ ಹೌಸ್' ಇದರ ನಿರ್ದೇಶಕರಾಗಿರುವ ಶೇಖ್ ಹಮ್ಮದ್ ಕಾರಕುನ್ನು ಅವರ ಮಲಯಾಳ ಗ್ರಂಥವನ್ನು ಪಿ. ನೂರ್ ಮುಹಮ್ಮದ್ ರು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಜಮಾಅತ್‌ನ ಕುರಿತು ಸರಿಯಾಗಿ ತಿಳಿಯಲು ಗೂ ತಪ್ಪು ಕಲ್ಪನೆಗಳನ್ನು ದೂರೀಕರಿಸಲು ಸಹಾಯಕವಾಗಬಹುದೆಂದು ಆಶಿಸುತ್ತೇವೆ.

*- ಪ್ರಕಾಶಕರು*

# ಅನುಕ್ರಮಣಿಕೆ

I

# ಆಧುನಿಕ ಇಸ್ಲಾಮೀ ಆಂದೋಲನಗಳ ಸ್ಥಾಪನೆಯ ಹಿನ್ನೆಲೆ

**ಮು**ತ್ತಿನ ಹಾರವೊಂದು ತುಂಡಾಗಿ ಮುತ್ತುಗಳೆಲ್ಲ ಚೆಲ್ಲಾ ಪಿಲ್ಲಿಯಾದವು. ಾಧ್ಯರು ಅದನ್ನು ಹೆಕ್ಕಿಕೊಂಡರು. ಈ ಶತಮಾನದ ಆರಂಭದಲ್ಲಿ ಇಸ್ಲಾಮೀ ಮುದಾಯದ ಅವಸ್ಥೆ ಇದೇ ಆಗಿತ್ತು.

1924ರ ಮಾರ್ಚ್ 23ರಂದು ಮುಸ್ತಫಾ ಕಮಾಲ್ ಪಾಶಾ, ನಾನು ಖಿಲಾಫತ್ ವಸ್ಥೆಯನ್ನು ರದ್ದುಗೊಳಿಸಿ ಖಲೀಫರನ್ನು ಪದಚ್ಯುತಗೊಳಿಸಿರುತ್ತೇನೆಂದು ಸಾರಿದರು. ತೀಯ ಸುಲ್ತಾನ್ ಅಬ್ದುಲ್ ಹಮೀದ್‌ರು ಉಸ್ಮಾನಿಯಾ ಖಿಲಾಫತ್‌ನ ಕೊನೆಯ ತಳಿತಗಾರರಾಗಿದ್ದರು. ಈ ಘೋಷಣೆಯ ಬಳಿಕ ಅವರು ಫ್ರಾನ್ಸ್‌ನಲ್ಲಿ ಹೋಗಿ ೆಸಿದರು. ಹೀಗೆ ಸುದೀರ್ಘ ಹದಿಮೂರುವರೆ ಶತಮಾನಗಳ ಕಾಲ ಕೇವಲ ಹೆಸರಿಗಾದರೂ ಳಿದಿದ್ದ ಇಸ್ಲಾಮೀ ಖಿಲಾಫತ್ ಕುಸಿಯಿತು. ಪ್ರವಾದಿಯವರ(ಸ) ಕಾಲದಿಂದಲೇ ುರಿಯಲ್ಲಿದ್ದ ಆಡಳಿತ ವ್ಯವಸ್ಥೆಯನ್ನು ನಿರ್ಮೂಲನಗೊಳಿಸಿದರೂ ಜಾಗತಿಕ ಮುಸ್ಲಿಮರಲ್ಲಿ ಬಗ್ಗೆ ವಿಶೇಷ ಪ್ರತಿಕ್ರಿಯೆ ಕಂಡು ಬರಲಿಲ್ಲ. ಏಕೆಂದರೆ, ಚಿಂತಾಜನಕ ಸ್ಥಿತಿಯಲ್ಲಿರುವ ೀಗಿಯ ಮರಣದಂತೆ ಅದು ನಿರೀಕ್ಷಿತವಾಗಿತ್ತು. ಉಸ್ಮಾನಿಯಾ ಖಿಲಾಫತ್, ಒಂದು ಟ್ಟು ರಕ್ತ ಹರಿಸದೆ ಕೇವಲ ಘೋಷಣೆಯಿಂದ ಉಚ್ಚಾಟಿಸಬಹುದಾದಷ್ಟು ಟೊಳ್ಳಾಗಿತ್ತು, ರ್ಬಲಗೊಂಡಿತ್ತು. ಆದ್ದರಿಂದಲೇ ಇಸ್ಲಾಮೀ ಜಗತ್ತಿನ ನಾಡಿಮಿಡಿತವಿಲ್ಲದ ಖಿಲಾಫತ್ ವಸ್ಥೆಯನ್ನು ನಿರ್ಮೂಲನಗೊಳಿಸಲು ಕಮಾಲ್ ಪಾಶಾರಿಗೆ ಸುಲಭವಾಯಿತು.

ಖಿಲಾಫತ್ ಕೊನೆಗೊಳ್ಳುವುದಕ್ಕಿಂತ ಕೆಲವು ದಶಕಗಳ ಮೊದಲೇ ಮುಸ್ಲಿಮ್ ಗತ್ತನ್ನು ಪೋಣಿಸುವ ದಾರವೆಂಬ ನೆಲೆಯನ್ನು ಅದು ಕಳೆದುಕೊಂಡಿತ್ತು. ವಿಚ್ಛಿದ್ರಗೊಂಡ ಲವು ಮುಸ್ಲಿಮ್ ಭೂಪ್ರದೇಶಗಳು ಪಾಶ್ಚಾತ್ಯ ಸಾಮ್ರಾಜ್ಯ ಶಕ್ತಿಗಳ ಅಧೀನವಾದುವು. 78ರಲ್ಲಿ ಪ್ರಥಮ ಸುಲ್ತಾನ್ ಅಬ್ದುಲ್ ಹಮೀದ್‌ರ ಕಾಲದಲ್ಲಿ ಸೈಪ್ರಸನ್ನು ಬ್ರಿಟನ್ ಧೀನ ಪಡಿಸಿತು. ವಸ್ತುತಃ ಸುಲ್ತಾನರು ಅದನ್ನು ಉಚಿತವಾಗಿ ನೀಡಿದ್ದರು. ಅದು 92ರಲ್ಲಿ ಗ್ರಾನಡ ಕುಸಿದ ಬಳಿಕ ಮುಸ್ಲಿಮ್ ಜಗತ್ತಿಗಾದ ಮಹಾ ನಷ್ಟವಾಗಿತ್ತು. ನಂತರ ಅವರು ಈಜಿಪ್ಟ್ ಮತ್ತು ಸುಡಾನ್‌ಗಳನ್ನು ವಶಪಡಿಸಿದರು. 1904ರಲ್ಲಿ ಬ್ರಿಟನ್ ತ್ತು ಫ್ರಾನ್ಸ್‌ಗಳು ಜೊತೆಗೂಡಿ ಮಧ್ಯಪೌರಾತ್ಯ ರಾಷ್ಟ್ರಗಳನ್ನು ಹಂಚಿಕೊಳ್ಳಲು

ತೀರ್ಮಾನಿಸಿದವು. ಅದಕ್ಕಾಗಿ ಅನೇಕ ಒಳಸಂಚುಗಳನ್ನು ರೂಪಿಸಿದರು. ಆ ಪ್ರ
ಉಗಾಂಡ, ಒಮಾನ್, ಖತರ್, ಕುವೈಟ್, ಗಾಝಿಯ, ನೈಜೀರಿಯಾ, ಬಹರೈನ್ ಮ
ಯಮನ್ ಮುಂತಾದ ರಾಷ್ಟ್ರಗಳು ಬ್ರಿಟನ್‌ನ ವಸಾಹತು ಅಥವಾ ಆಶ್ರಿತ ಪ್ರದೇಶಗಳಾ
ಅಲ್ಜೀರಿಯಾ, ಐವರಿ ಕೋಸ್ಟ್, ಕೆಂಬೋಡಿಯಾ, ಕೆಮರೂನ್ ದ್ವೀಪಗಳು, ಗಿನಿ, ಜಿಬು
ಮನೀಶ, ನೈಜರ್, ಮಾಲಿ, ಮೊರೊಕ್ಕೊ, ಮೊರಿಟಾನಿಯ, ಲೆಬನಾನ್, ಸಿರಿಯಾ
ಫ್ರಾನ್ಸ್‌ನ ಅಧೀನವಾದವು. ಅಲ್ಬೇನಿಯಾ, ಇಂಡೋನೇಶ್ಯ, ಲಿಬಿಯಾ, ಸೊಮಾಲಿಯದ
ಪ್ರದೇಶಗಳನ್ನು ಇಟಲಿ, ಜರ್ಮನ್, ಡಚ್ ಸಾಮ್ರಾಜ್ಯಶಾಹಿಗಳು ಹಂಚಿಕೊಂಡ
ಅದರೊಂದಿಗೆ ಫೆಲಸ್ತೀನಿನಲ್ಲಿ ಝಿಯೋನಿಝಮ್‌ನ ಬುನಾದಿ ಹಾಕಲಾಯಿತು. ಅಫ್ಘಾ
ಮತ್ತು ಇರಾನ್‌ಗಳು, ಇಂಗ್ಲೆಂಡ್ ಮತ್ತು ರಶ್ಯಾಗಳ ಪಿತೂರಿಯ ನೆಲೆಯಾದವು. ಪಾಕಿಸ
ಮತ್ತು ಬಾಂಗ್ಲಾದೇಶ ಸೇರಿದ್ದ ಭಾರತವು ಅದಾಗಲೇ ಬ್ರಿಟಿಷ್ ಸಾಮ್ರಾಜ್ಯಶಾಹಿ
ದಬ್ಬಾಳಿಕೆಯಲ್ಲಿತ್ತು. ಹೀಗೆ ಇಸ್ಲಾಮಿ ಜಗತ್ತು ಇತಿಹಾಸದ ಅತ್ಯಂತ ಕ್ಲಿಷ್ಟ ಮ
ಶೋಚನೀಯ ಬಿಕ್ಕಟ್ಟಿಗೆ ಗುರಿಯಾಯಿತು.

ಪೌರಾತ್ಯ ರಾಷ್ಟ್ರಗಳನ್ನು ಆಕ್ರಮಿಸಿ ಆಧಿಪತ್ಯ ಸ್ಥಾಪಿಸಿದ ಪಾಶ್ಚಾತ್ಯ ಸಾಮ್ರಾ
ಶಕ್ತಿಗಳು ಐತಿಹಾಸಿಕ ಅಥವಾ ಇತರ ಕಾರಣಗಳಿಂದ ಧರ್ಮ ನಿರಪೇಕ್ಷ ಅಥವಾ ಧ
ವಿರೋಧಿಗಳಾಗಿದ್ದವು. ಕನಿಷ್ಠ ಪಕ್ಷ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಆದ
ರಂಗಗಳಲ್ಲಿ ಧಾರ್ಮಿಕ ಪ್ರಭುತ್ವವು ಅವರಿಗೆ ಅಸಹ್ಯವಾಗಿದ್ದಿತು. ಅವರು ಸೀಝರ್‌ನ
ಸೀಝರಿಗೆ, ದೇವನದ್ದು ದೇವನಿಗೆ ಎಂಬ ಘೋಷಣೆಯಿಂದ ಜೀವನದ ಬಹುಪಾ
ಸ್ವೇಚ್ಛೆಗೆ ಅಧೀನಗೊಳಿಸಿದ್ದರು. ಪಾಶ್ಚಾತ್ಯರು ತಮ್ಮ ಅಕ್ರಮಿತ ಪ್ರದೇಶಗಳಲ್ಲಿ ತಮ್ಮ
ಸಿದ್ಧಾಂತ, ಆಚಾರ ವಿಚಾರ, ಗುಣ ನಡತೆ, ಧೋರಣೆ, ಸಂಸ್ಕೃತಿಗಳನ್ನು ವ್ಯಾಪಕ
ಪ್ರಚಾರ ಮಾಡಿದರು. ಅದಕ್ಕಾಗಿ ಅವರು ನರ್ಸರಿಯಿಂದ ವಾರ್ಸಿಟಿವರೆಗಿನ ಶಿ
ಸಂಸ್ಥೆಗಳನ್ನೂ ಪತ್ರಿಕೆ, ಪುಸ್ತಕ, ಕಲೆ, ಸಾಂಸ್ಕೃತಿಕ ಸಂಸ್ಥೆಗಳನ್ನೂ ಬಳಸಿದರು. ಧರ್ಮ ಮ
ರಾಜಕೀಯಕ್ಕೆ ಪರಸ್ಪರ ಸಂಬಂಧವಿಲ್ಲ. ಧರ್ಮವು ರಾಜಕೀಯದಲ್ಲಿ ಹಸ್ತಕ್ಷೇಪ ನಡೆಸಬಾರದ
ಪ್ರಚಾರದಿಂದ ಜಿಹಾದ್ ಮತ್ತು ಸ್ವಾತಂತ್ರ್ಯದ ಸ್ಫೂರ್ತಿಯನ್ನು ಅಳಿಸಿ, ಅಧಿಕಾರ
ಪಡಿಸುವ ರಾಜಕೀಯ ಉದ್ದೇಶವನ್ನೂ ಅವರು ಹೊಂದಿದ್ದರು. ಹೀಗೆ ಮುಸ್ಲಿಮ
ಇಸ್ಲಾಮಿನಿಂದ ದೂರಸರಿಸುವ ತೀವ್ರ ಪ್ರಯತ್ನ ನಡೆಸಿದರು. ಅದರಲ್ಲಿ ಅವರು ಯಶಸ್ವಿ
ಆದರು. ಇದರಿಂದಾಗಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ, ಆದ
ರಂಗಗಳಲ್ಲಿ ಜನರಿಗೆ ಕಾನೂನು ನಿರ್ಮಾಣದ ಪರಮಾಧಿಕಾರವೆಂಬ ಲೌಕಿಕ ನೀತಿ
ಮುಸ್ಲಿಮರಲ್ಲಿ ವ್ಯಾಪಕ ಪ್ರಭಾವ ಮತ್ತು ಪ್ರಚಾರ ಗಿಟ್ಟಿಸಿತು. ಹೀಗೆ ಧರ್ಮ ಮ
ದೇವನಿಗೆ ಮಾನವ ಜೀವನದ ನಿಯಾಮಕ ಶಕ್ತಿಯೆಂಬ ಸ್ಥಾನವನ್ನು ನಿರಾಕರಿಸಲಾಯಿ
ಧರ್ಮ ವಿಶ್ವಾಸವು ಕೇವಲ ಖಾಸಗಿ ಜೀವನಕ್ಕೆ ಸೀಮಿತವಾಗಿರಬೇಕು. ಸಾರ್ವ

ವನದಲ್ಲಿ ಅದಕ್ಕೆ ಅವಕಾಶ ವಿರಬಾರದೆಂಬ ಲೌಕಿಕ ಧೋರಣೆಗೆ ಎಲ್ಲೆಡೆ ಮನ್ನಣೆ ುರೆಯಿತು. ಕೆಲವು ಮುಸ್ಲಿಮ್ ವಿದ್ವಾಂಸರು ಮತ್ತು ನಾಯಕರು ಅದರ ವಕ್ತಾರರಾದರು. ರ್ಮವು ದೇವನಿಗೆ, ರಾಷ್ಟ್ರವು ಜನರಿಗೆ' (ಅದ್ದೀನು ಲಿಲ್ಲಾಹಿ ವಲ್ ವತನು ಲಿಲ್ ುಅ್). 'ಧರ್ಮವು ದೇವನಿಗೆ ಕಾನೂನು ನಿರ್ಮಾಣಾಧಿಕಾರ ಜನತೆಗೆ' (ಅದ್ದೀನು ್ಲಾಹಿ ವಶ್ಶರಉ ಅಶ್ಶಅ್‌ಬ್) ಮುಂತಾದ ಘೋಷಣೆಗಳನ್ನು ಕೂಗಿದ ಸಅ್‌ದ್ ್ಲೂಲ್ (ಈಜಿಪ್ಟ್‌ನ ವಫ್ದ್ ಪಕ್ಷದ ಸ್ಥಾಪಕ ನಾಯಕ) ಆಡಳಿತ ಮತ್ತು ರಾಜಕೀಯವು ಕಿಕ ವಿಷಯವಾಗಿದ್ದು ಅವುಗಳಿಗೆ ಧರ್ಮದೊಂದಿಗೆ ಸಂಬಂಧವಿಲ್ಲವೆಂದು ಸಾಧಿಸಲಿಕ್ಕಾಗಿ ್ಲಾಮ್ ಮತ್ತು ಆಡಳಿತ ಸಿದ್ಧಾಂತ (ಅಲ್ ಇಸ್ಲಾಮು ವ ಉಸೂಲುಲ್ ಹುಕ್ಮ್) ುಬ ಗ್ರಂಥ ರಚಿಸಿದ ಅಲಿ ಅಬ್ದು ರ್ರಾಝಿಕ್‌ರೂ ಅವರಲ್ಲಿ ಸೇರಿದ್ದಾರೆ.

ಪಾಶ್ಚಾತ್ಯರು ಪೌರಾತ್ಯ ರಾಷ್ಟ್ರಗಳಿಂದ ಹೊರಟು ಹೋದ ಬಳಿಕವೂ ಈ ವರ್ಗವು ್ಮ ವಿಕೃತ ವಾದವನ್ನು ಮುಂದುವರಿಸಿತು. ವಿಕೃತಗೊಳಿಸಲಾದ ಧರ್ಮದಿಂದ ಸಮುದಾಯವು ತೃಪ್ತವಾಯಿತು. ಸಾಮ್ರಾಜ್ಯ ಶಾಹಿತ್ವದ ಅಂತ್ಯದ ಬಳಿಕ ಪಾಶ್ಚಾತ್ಯ ಧೋರಣೆ, ಚಾರಧಾರೆಗಳು ಆಧುನಿಕ ಮತ್ತು ಪ್ರಗತಿಪರವೆಂದು ನಂಬಿ ಅದರ ಜಾರಿಗೆ ಉತ್ಸುಕವಾಗಿದ್ದ ರ್ಮರಹಿತ ಭೌತಿಕ ಸರಕಾರಗಳು ಅಧಿಕಾರ ವಹಿಸಿಕೊಂಡವು.

ಸಾಮ್ರಾಜ್ಯಶಾಹೀ ಆಕ್ರಮಣ ಮತ್ತು ಅದರ ವೈಚಾರಿಕ ಪರಿಣಾಮವು ಮುಸ್ಲಿಮರ ನಸ್ಸನ್ನು ಕದಡುವುದಕ್ಕಿಂತ ಮುಂಚೆ, ಜೀವನದ ಎಲ್ಲಾ ರಂಗಗಳಲ್ಲಿಯೂ ಕಾನೂನು ರ್ಮಾಣದ ಪರಮಾಧಿಕಾರ (Supreme Sovereignty) ಅಲ್ಲಾಹನಿಗೆಂಬ ಸ್ತವಿಕತೆಯನ್ನು ಮುಸ್ಲಿಮರು ತಾತ್ವಿಕವಾಗಿ ಅಂಗೀಕರಿಸಿದ್ದರು. ವ್ಯಾವಹಾರಿಕ ಜೀವನದಲ್ಲಿ ನ್ನು ಪಾಲಿಸದವರೂ ಈ ದೃಷ್ಟಿಕೋನವನ್ನು ಹೊಂದಿದ್ದರು. ಇಸ್ಲಾಮಿ ಕಾನೂನು ವಸ್ಥೆಯನ್ನು (ಶರೀಅತ್) ಆಡಳಿತ ರಂಗದಲ್ಲಿ ಜಾರಿಗೊಳಿಸದ ಮುಸ್ಲಿಮ್ ಆಡಳಿತಗಾರರೂ ್ಲಾಹನೇ ರಾಷ್ಟ್ರದ ಕಾನೂನು ನಿರ್ಮಾಣದ ಪರಮಾಧಿಕಾರಿಯೆಂದೂ ಕುರ್‌ಆನ್ ಮತ್ತು ನ್ನತ್‌ಗಳು ಕಾನೂನು ನಿರ್ಮಾಣದ ಮೂಲಾಧಾರವೆಂದೂ ಒಪ್ಪಿದ್ದರು. ಅರ್ಥಾತ್ ದೇವನ ಸನ ಕರ್ತೃತ್ವ ಮತ್ತು ಸಾರ್ವಭೌಮತೆಯನ್ನು ಅದರ ವ್ಯಾವಹಾರಿಕ ಬೇಡಿಕೆಯಾಗಿರುವ ್ಲಾಮಿ ಶರೀಅತನ್ನು ಜಾರಿಗೊಳಿಸದಿದ್ದರೂ ಅದನ್ನು ನಾಮಧಾರೀ ಮುಸ್ಲಿಮ್ ಡಳಿತಗಾರರೂ ತಾತ್ವಿಕವಾಗಿ ನಿರಾಕರಿಸುತ್ತಿರಲಿಲ್ಲ.

ಆದರೆ ಹೊಸ ಹಿನ್ನೆಲೆಯಲ್ಲಿ, ಪೌರಾತ್ಯ ರಾಷ್ಟ್ರಗಳಲ್ಲಿ ಸಕ್ರಿಯರಾದ ಮುಸ್ಲಿಮ್ ತ್ತು ಮುಸ್ಲಿಮೇತರ ರಾಜಕೀಯ ನೇತಾರರ ಮತ್ತು ಜಾತ್ಯಾತೀತ ಸರಕಾರಗಳ ಧೋರಣೆಯಲ್ಲಿ ವ್ರ ಬದಲಾವಣೆಯಾಯಿತು. ಅವರು ಸಾಮಾಜಿಕ ಅರ್ಥಾತ್, ಸಾಂಸ್ಕೃತಿಕ, ರಾಜಕೀಯ, ಡಳಿತ ರಂಗಗಳಲ್ಲಿ ಕಾನೂನು ನಿರ್ಮಾಣದ ಪರಮಾಧಿಕಾರವು ಜನರಿಗೆ ಎಂದು ತೀವ್ರ

ಪ್ರಚಾರ ಮಾಡಲಾರಂಭಿಸಿದರು. ಮೊದಮೊದಲು ಅದರಿಂದ ದೂರ ನಿಂತ ಧಾವಿ ವಿದ್ವಾಂಸರು ಕ್ರಮೇಣ ಆ ಪ್ರಚಾರಗಳನ್ನು ಬೆಂಬಲಿಸಿ ಫತ್ವಾ ನೀಡಲಾರಂಭಿಸಿದ ಜನಸಾಮಾನ್ಯರು ಅದಕ್ಕೆ ಹೊಂದಿಕೊಂಡರು. ಹೀಗೆ ಜೀವನದ ಪ್ರಮುಖ ರಂಗಗ ಅಲ್ಲಾಹ್ ಮತ್ತು ಆತನ ಸನ್ಮಾರ್ಗ ದರ್ಶಕ ಕಾನೂನುಗಳನ್ನು ಕೈ ಬಿಡಲಾಯಿತು. ( ಹಿತದ ಬದಲಾಗಿ ಮಾನವಚಿತ್ತ ಪ್ರಭುತ್ವಗಳಿಸಿತು. ಈ ಸ್ಥಿತಿಯನ್ನು ಆಂಗ್ಲ ಸಾ ಲಾರೆನ್ಸ್ ಬ್ರೌನ್‌ರು 'ದಿ ಪ್ರೊಸ್ಪೆಕ್ಟ್ ಆಫ್ ಇಸ್ಲಾಮ್' ಎಂಬ ಕೃತಿಯಲ್ಲಿ ಹೀಗೆ ಮಾಡಿದ್ದಾರೆ. "ಇಸ್ಲಾಮಿನ ಸಿವಿಲ್, ಕ್ರಿಮಿನಲ್ ಕಾನೂನು ಗಳು ಅಪ್ರಸ್ತುತ ವ ಅವ್ಯಾವಹಾರಿಕ ಎಂಬ ನೆಲೆಯಲ್ಲಿ ಭಾರತದಲ್ಲಿ ಅದನ್ನು ರದ್ದು ಪಡಿಸಿ ಮುಸ್ಲಿಮರಿಗೆ ಕೇ ಅವರ ವೈಯಕ್ತಿಕ ಕಾನೂನುಗಳನ್ನು ಅನುಮತಿಸಿದಾಗ ಅದು ಅವರಿಗೆ ಬ ಅರೋಚಕವೆನಿಸಿತ್ತು. ಏಕೆಂದರೆ, ಅದರಿಂದಾಗಿ ಅವರ ಸ್ಥಾನವು ಒಂದೊಮ್ಮೆ ಇಸ್ಲಾ ಆಡಳಿತದಲ್ಲಿದ್ದ 'ದಿಮ್ಮಿ'ಗಳ ಮಟ್ಟಕ್ಕೆ ತಲುಪುತ್ತಿತ್ತು. ಆದರೆ ಇಂದು ಅದನ್ನು ಭಾರತಿ ಮುಸ್ಲಿಮರೇ ಮೆಚ್ಚಿದ್ದಾರೆ. ಮಾತ್ರವಲ್ಲ, ಮುಸ್ಲಿಮ್ ಸರಕಾರಗಳೂ ಪ್ರಸ್ತುತ ವಿಷಯ ನಮ್ಮನ್ನು ಅನುಕರಿಸುತ್ತಿವೆ. ಟರ್ಕಿ ಮತ್ತು ಅಲ್ಬೇನಿಯಾಗಳು ಮತ್ತಷ್ಟು ಮುಂದುವ ವಿವಾಹ, ವಿವಾಹ ವಿಚ್ಛೇದನ, ವಾರೀಸು ಹಕ್ಕು ಇತ್ಯಾದಿ ಕಾನೂನುಗಳಲ್ಲಿಯೂ ನ ನೀತಿಯನುಸಾರ ಸುಧಾರಣೆಗಳನ್ನು ಮಾಡಿವೆ. ದೇವ ಹಿತವು ಕಾನೂನಿನ ಮ ಕೇಂದ್ರವೆಂಬ ಮುಸ್ಲಿಮರ ಕಲ್ಪನೆಯು ಒಂದು ಪವಿತ್ರ ಕಟ್ಟು ಕಥೆ (Pious fiction)ಯೆಂಬ ಈಗ ನಿಚ್ಚಳಗೊಂಡಿದೆ."

ಹೀಗೆ ಆಂಶಿಕ ಅಥವಾ ಪೂರ್ಣ ಧರ್ಮ ನಿಷೇಧವು ಜೀವನವನ್ನು ಆಮೂ ಬಾಧಿಸಿತು. ಈ ಪ್ರಕ್ರಿಯೆ ಸ್ವಲ್ಪಂಶ ನಿರಂತರವಾಗಿದ್ದರೂ ಅದೊಂದು ಆಂದೋ ಅಥವಾ ತತ್ವ ಸಿದ್ಧಾಂತದ ರೂಪ ತಾಳಿರಲಿಲ್ಲ. ಆದರೆ ರಾಷ್ಟ್ರೀಯತೆ, ಜಾತೀಯತೆ ವ ಸಮಾಜ ವಾದಗಳ ಹೆಸರಲ್ಲಿ ಹುಟ್ಟಿಕೊಂಡ ಆಂದೋಲನ ಮತ್ತು ತತ್ವ ಸಿದ್ಧಾಂತ ಧರ್ಮವನ್ನೂ ದೇವ ಮಾರ್ಗವನ್ನೂ ಸಾರ್ವಜನಿಕ ಜೀವನದಿಂದ ದೂರಸರಿಸುವ ಯೋ ಪ್ರಯತ್ನಗಳನ್ನು ನಡೆಸಿದವು. ಜನರಿಗೆ ಸಾರ್ವಭೌಮತೆಯೆಂಬ ಅವುಗಳ ತೀವ್ರ ಪ್ರಚಾರ ಇಸ್ಲಾಮಿನ ತೌಹೀದ್ ಕಲ್ಪನೆಗೆ ಭಾರೀ ಆಘಾತವುಂಟಾಯಿತು. ತಿರುಳನ್ನು ತೊರೆದು ಕೇ ಆಂಶಿಕ ತೌಹೀದ್‌ನಿಂದ ಮುಸ್ಲಿಮರು ತೃಪ್ತರಾಗುವ ಸ್ಥಿತಿ ಬಂತು.

ತತ್ಪರಿಣಾಮವಾಗಿ ಇಸ್ಲಾಮಿನ ಬಗೆಗಿನ ಕಲ್ಪನೆಯೂ ವಿಕೃತವಾಯಿತು. ( ಮಾನವ ಜೀವನಕ್ಕೆ ನೀಡಲಾದ ದೇವ ವ್ಯವಸ್ಥೆಯೆಂಬ ಕಲ್ಪನೆಯನ್ನು ಮುಸ್ಲಿ ವಿದ್ವಾಂಸರು ಮರೆತು ಬಿಟ್ಟರು. ಇತರ ಧರ್ಮಗಳಂತೆಯೇ ಇಸ್ಲಾಮ್ ಕೂಡ ಕೇ ಕೆಲವು ಆಚಾರ ಕರ್ಮಗಳೆಂಬ ದೃಷ್ಟಿಕೋನ ಬೆಳೆಯಿತು. ಅದು ಕೇವಲ ಕೆ ಆರಾಧನೆಗಳಿಗೆ ಸೀಮಿತವಾದ ಮಾನವ ಮತ್ತು ದೇವನ ನಡುವಣ ಖಾ

ವಹಾರವಾಯಿತು. ಹೀಗೆ ಜಗತ್ತಿನ ಮಾರ್ಗದರ್ಶನ ಮತ್ತು ನಿಯಂತ್ರಣಕ್ಕಾಗಿ ನೀಡಲಾದ ೀವನ ವ್ಯವಸ್ಥೆಯೆಂಬ ಇಸ್ಲಾಮಿನ ನೈಜ ಸ್ಥಾನ ಅಳಿದು ಹೋಯಿತು.

ಧರ್ಮರಾಹಿತ್ಯ ಪ್ರಕ್ರಿಯೆಯು ಕೇವಲ ಸಾರ್ವಜನಿಕ ಜೀವನಕ್ಕೆ ಸೀಮಿತವಾಗಿರಲಿಲ್ಲ. ದು ವಿಶ್ವಾಸಗಳನ್ನು ಆಕ್ರಮಿಸಿತು. ಅಲ್ಲಾಹ್, ಪರಲೋಕ, ಸ್ವರ್ಗ, ದೇವಚರ, ಪಿಶಾಚಿ ಮುಂತಾದ ಅಗೋಚರ ವಿಶ್ವಾಸಕ್ಕೆ ಲೌಕಿಕ ಜೀವನದ ದೃಷ್ಟಿಕೋನವು ಘಾಸಿ ಮಾಡಿತು. ವುಗಳ ಬಗ್ಗೆ ಸಂದೇಹ ಮೂಡಿತು. ಮುಅ್‌ಜಿಝಾತ್, ಕರಾಮತ್ (ಪವಾಡ)ಗಳನ್ನು ೌಕಿಕ ಮಾನದಂಡದಿಂದ ವ್ಯಾಖ್ಯಾನಿಸುವ ಧರ್ಮ ವಿದ್ವಾಂಸರೂ ಅವುಗಳನ್ನು ನಿರಾಕರಿಸುವ ದ್ವಾವಂತರೂ ರಂಗಕ್ಕಿಳಿದರು. ಇಸ್ಲಾಮಿ ಆಡಳಿತ ಮತ್ತು ವ್ಯವಸ್ಥೆಯು ಕಾಲಹರಣಗೊಂಡಿವೆ. ದರ ಸಿವಿಲ್, ಕ್ರಿಮಿನಲ್ ನಿಯಮಗಳು ಅನಾಗರಿಕವಾಗಿವೆಯೆಂಬ ಪ್ರಚಾರ ಬಲಗೊಂಡಿತು. ದೀಸ್ ನಿರಾಕರಣೆಯ ಪ್ರಕ್ರಿಯೆಯೂ ಬೆಳೆಯಿತು. ಇದರಿಂದಾಗಿ ಮುಸ್ಲಿಮರಲ್ಲಿ ಇಸ್ಲಾಮಿ ಲವು ಕಡಿಮೆಯಾಯಿತು. ಅವರಲ್ಲಿ ಕೀಳರಿಮೆ ನೆಲೆಸಿತು. ಪಾಶ್ಚಾತ್ಯ ನೀತಿಗಳನ್ನು ೆರವಾದರಗಳಿಂದ ಅಂಗೀಕರಿಸುವ ಹಂಬಲ ಹೆಚ್ಚಿತು. ಹತಾಶ ಮನೋಭಾವ ಮತ್ತು ಮಾಪಣ ಶೈಲಿ ಸಮುದಾಯದಲ್ಲಿ ಸಾಮಾನ್ಯವಾಯಿತು.

ವಿದ್ವಾಂಸರೂ ನಾಯಕರೂ ಅದರಿಂದ ಹೊರತಾಗಿರಲಿಲ್ಲ. ಮಾತ್ರವಲ್ಲ, ಅವರೇ ಈ ವಿಷಯದಲ್ಲಿ ಮುಂಚೂಣಿಯಲ್ಲಿದ್ದರು. ಆದ್ದರಿಂದ ಅವರು ಪಾಶ್ಚಾತ್ಯ ಸಿದ್ಧಾಂತಗಳಿಗೆ ೂರಕವಾಗಿ ಇಸ್ಲಾಮನ್ನು ವ್ಯಾಖ್ಯಾನಿಸುವ ಕಾರ್ಯಕ್ಕೆ ತೊಡಗಿದರು. ಜಾತ್ಯತೀತತೆ, ರಾಷ್ಟ್ರೀಯತೆ, ಮಾಜವಾದ ಮುಂತಾದ ಲೌಕಿಕ ಸಿದ್ಧಾಂತಗಳಿಗೆ ಇಸ್ಲಾಮಿನ ಬಟ್ಟೆ ತೊಡಿಸಲು ಶ್ರಮಿಸಿದರು. ತನ್ಮೂಲಕ ಅವರು, ಐಹಿಕ ಜೀವನದಲ್ಲಿ ಶಾಂತಿ-ಸಮೃದ್ಧಿ ಒದಗಿಸಲು ರ್ಮಕ್ಕೆ ಸಾಧ್ಯವಿಲ್ಲ, ಅದಕ್ಕೆ ಭಂಡವಾಳ ಶಾಹಿತ್ವ, ಕಮ್ಯೂನಿಝಮ್, ಜಾತ್ಯತೀತತೆ, ಮಾಜವಾದಗಳಂತಹ ಲೌಕಿಕ ಸಿದ್ಧಾಂತಗಳ ಅಗತ್ಯವಿದೆಯೆಂಬ ಪಾಶ್ಚಾತ್ಯ ಪ್ರಚಾರಗಳಿಗೆ ಂಬಲ ನೀಡಿದರು.

ಪಾಶ್ಚಾತ್ಯ ಲೌಕಿಕ ಸಿದ್ಧಾಂತಗಳು ಮುಸ್ಲಿಮರ ಆಚಾರ, ವಿಚಾರ, ಸಂಸ್ಕೃತಿಗಳ ಮೇಲೆಯೂ ಗಾಢ ಪರಿಣಾಮ ಬೀರಿತು. ಅನೇಕ ವಿದ್ಯಾವಂತ ಮುಸ್ಲಿಮರೂ ನಾವು ಮುಸ್ಲಿಮರೆಂದು ಬಹಿರಂಗವಾಗಿ ಹೇಳಲು ಸಂಕೋಚ ಪಟ್ಟರು. ವೇಷ ಭೂಷಣಗಳನ್ನು ಪಾಶ್ಚಾತ್ಯೀಕರಣಗೊಳಿಸಲು ಗರಿಷ್ಠ ಪ್ರಯತ್ನಿಸಿದರು. ಪೂರ್ವದ ರೂಪವಿದ್ದರೂ ಪಶ್ಚಿಮದ ಮನಸ್ಸು ಹೊಂದಿದ ಜಂಟ್ಲ್‌ಮನ್ ಮತ್ತು ಲೇಡೀಸ್‌ಗಳ ಹೊಸ ಪೀಳಿಗೆಯೊಂದು ಬೆಳೆಯಿತು. ಸಮಾಜದ ಉನ್ನತ ಮಟ್ಟದಲ್ಲಿ ಅವರು ಸ್ಥಾನ ಗಳಿಸಿದರು. ಜನ ಸಾಮಾನ್ಯರ ಜೀವನ ರೀತಿಯನ್ನು ಅವರೇ ರೂಪಿಸಿ ನಿಯಂತ್ರಿಸುತ್ತಿದ್ದರು. ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ರಂಗಗಳನ್ನೂ ಅವರೇ ಸ್ವಾಧೀನ ಪಡಿಸಿದ್ದರು.

ಈ ಕಾರಣಗಳಿಂದಾಗಿ ಮುಸ್ಲಿಮರು ಒಂದು ಮಾದರಿ ಸಮಾಜವೆಂಬ ಸ್ಥಾನವ ಕಳೆದುಕೊಂಡರು. ಅವರು ಶಿಥಿಲಗೊಂಡ ಪರಂಪರಾಗತ ಜಾತಿಯಾಗಿ ಮಾರ್ಪಟ್ಟಿದ್ದ ಅದರೊಂದಿಗೆ ನಾನಾ ರೀತಿಯ ವಿಭಾಗೀಯತೆ ಸಮುದಾಯದಲ್ಲಿ ಕಾಣಿಸಿಕೊಂಡಿತು. ಅವ ಸುನ್ನಿ, ಶಿಯಾ, ಶಾಫಿಈ, ಹನಫೀ, ಹಂಬಲಿ, ಮಾಲಿಕಿ, ಜಲ್‌ಫರಿ, ಝೈದಿ ಮುಂತ ಪಂಗಡಗಳಾದರು. ಅರಬನೂ ಟರ್ಕಿಯೂ ಫಾರ್ಸಿಯೂ ಪಠಾಣನೂ ಅಫಘಾನಿಯ ಪಂಜಾಬಿಯೂ ಪರಸ್ಪರ ಕಚ್ಚಾಡಿದರು.

ಹೀಗೆ ಮುಸ್ಲಿಮ್ ಜಗತ್ತು ಈ ಶತಮಾನದ ಆರಂಭ ದಶಕದಿಂದ ಇಸ್ಲಾ ಇತಿಹಾಸದಲ್ಲಿ ಹಿಂದೆಂದೂ ಇಲ್ಲದಂತಹ ಅತ್ಯಂತ ಗಂಭೀರ ಪತನ ಮತ್ತು ಬಿಕ್ಕಟ್ಟ ಅನುಭವಿಸುತ್ತಿತ್ತು. ಇಂದು ಜಗತ್ತಿನಾದ್ಯಂತ ಮೊಳಗುತ್ತಿರುವ ಇಸ್ಲಾಮಿ ಕ್ರಾಂತಿಯ ಪದವು ಅಂದು ಅಪರಿಚಿತವಾಗಿತ್ತು. ಹೀಗೆ ನವೋದಯ ಎಲ್ಲಾ ರೀತಿಯಿಂದ ಅನಿವಾರ್ಯವಾಗಿದ್ದಂತಹ ಪರಿಸ್ಥಿತಿಯಲ್ಲಿ ಆಧುನಿಕ ಇಸ್ಲಾಮಿ ಆಂದೋಲನಗ ಹುಟ್ಟಿಕೊಂಡವು. ಅವು ಇತಿಹಾಸದ ಬೇಡಿಕೆ ಮತ್ತು ಕಾಲದ ಅವಶ್ಯಕತೆಯಾಗಿದ್ದಿತು.



II

# ಇಸ್ಲಾಮೀ ಆಂದೋಲನದ ಭಾರತೀಯ ಹಿನ್ನೆಲೆ

**1831**ರ ಮೇ 6ರಂದು ಸಯ್ಯದ್ ಅಹ್ಮದ್ ಬರೇಲ್ವಿ ಹುತಾತ್ಮರಾದರು. ಅವರು )ನೇ ಶತಮಾನದ ಧೀರ ಇಸ್ಲಾಮೀ ಕ್ರಾಂತಿಕಾರಿಯಾಗಿದ್ದರು. ಬ್ರಿಟಿಷರ ಆಕ್ರಮಣ ಬೆದರಿಕೆ ುತ್ತು ಸಾಗರ ಕಳ್ಳರ ಆಕ್ರಮಣ ಭೀತಿ ಇರುವುದರಿಂದ ಹಜ್ಜ್ ಕರ್ಮ ನಿರ್ವಹಣೆ ್ಯಾಯವಲ್ಲ. ಅದು ನಿಷಿದ್ಧವೆಂದು ಕೆಲವು ವಿದ್ವಾಂಸರು ಫತ್ವಾ ನೀಡಿದ್ದರು. ಆ ಿಸ್ಥಿತಿಯಲ್ಲಿ ಸಯ್ಯದ್ ಅಹ್ಮದ್ ಬರೇಲ್ವಿಯವರು ನೂರಾರು ಜನರನ್ನು ಸೇರಿಸಿ ಹಜ್ಜ್ ಾತ್ರೆಗೆ ಹೊರಡಲು ರಂಗಕ್ಕಿಳಿದಿದ್ದರು. ಅನಂತರ ಸಿಕ್ಖ್ ಧರ್ಮಾಂಧರ ಬೆದರಿಕೆಯನ್ನು ುರಿಸಲಿಕ್ಕಾಗಿ ಎರಡು ವರ್ಷಗಳಲ್ಲಿ ಒಂದು ಸೇನೆಯನ್ನು ಸಜ್ಜುಗೊಳಿಸಿದರು. 1826ರ ನವರಿ 18ರಂದು ಸಯ್ಯದ್ ಅಹ್ಮದರು ಅವರನ್ನು ಕರೆದುಕೊಂಡು ವಾಯುವ್ಯ ಗಡಿ ದೇಶಕ್ಕೆ ವಲಸೆ ಹೋದರು. 600 ಯೋಧರ ಜೊತೆಯಲ್ಲಿ ಗ್ವಾಲಿಯರ್, ಅಮರ್‌ಕೋಟ್, ಜ್ಮೀರ್, ಸಿಂಧ್‌ನ ಹೈದರಾಬಾದ್, ಪೀರ್‌ಕೋಟ್, ಶಿಕಾರ್‌ಪೂರ್, ಗಝ್ನಿ, ಕಾಬೂಲ್, ಲಾಲಾಬಾದ್‌ಗಳನ್ನು ಹಾದು ಪೇಶಾವರಕ್ಕೆ ತಲುಪಿದರು. ಅವರನ್ನು ಎದುರಿಸಲಿಕ್ಕಾಗಿ ುಧ್ ಸಿಂಗ್‌ನ ನಾಯಕತ್ವದಲ್ಲಿ ಸುಮಾರು 10,000 ಸಿಕ್ಖರ ಸೇನೆಯು ಹೊರಟಿತು. ಯ್ಯದ್ ಅಹ್ಮದ್‌ರ ಅಧೀನವಿದ್ದ ಸಾವಿರಕ್ಕಿಂತ ಕಡಿಮೆ ಯೋಧರ ಮುಸ್ಲಿಮ್ ಸೇನೆಯು ) ಪಟ್ಟು ಅಧಿಕವಿದ್ದ ಸಶಸ್ತ್ರ ವೈರಿ ಪಡೆಯನ್ನು ಎದುರಿಸಿ ಗೆದ್ದಿತು. ಇದರಿಂದಾಗಿ ುಸ್ಲಿಮರು ಸಾಮೂಹಿಕವಾಗಿ ಸಯ್ಯದ್ ಅಹ್ಮದ್‌ರ ಜತೆಗೂಡಿದರು. ಅವರ ಸೇನಾಬಲ ುದೂವರೆ ಲಕ್ಷವನ್ನೂ ಮೀರಿತು. ಅವರ ಬೆಂಬಲದಿಂದ ಪೇಶಾವರ ರಾಜಧಾನಿಯಾಗಿರುವ ಸ್ಲಾಮೀ ರಾಷ್ಟ್ರವೊಂದನ್ನು ಸ್ಥಾಪಿಸಿದರು. ಅದು ಸುಭದ್ರ ಮತ್ತು ಆದರ್ಶಪ್ರಾಯವಾಗಿತ್ತು. ನರೆ ವೈರಿಗಳು ಅದನ್ನೂ ಅಳಿಸಲು ಪಿತೂರಿ ನಡೆಸಿದರು. ಕೊನೆಗೆ ಮೋಸದಿಂದ ಸಯ್ಯದ್ ಹ್ಮದ್ ಮತ್ತು ಅವರ ಸೇನೆಯನ್ನು ಆಕ್ರಮಿಸಿ ಸೋಲಿಸಿದರು. ವೈರಿಗಳ ಇರಿತದಿಂದ ಯ್ಯದ್ ಅಹ್ಮದ್ ಬರೇಲ್ವಿ ಕುಸಿದು ಬಿದ್ದರು. ಅದೇ ಹೋರಾಟದಲ್ಲಿ ಅವರ ಹೋದ್ಯೋಗಿಯಾಗಿದ್ದ ಖ್ಯಾತ ವಿದ್ವಾಂಸ ಶಾ ಇಸ್ಮಾಈಲ್‌ರೂ ಹುತಾತ್ಮರಾದರು. ಹೀಗೆ ಲಾಕೋಟ್ ಯುದ್ಧದಲ್ಲಿ ಈ ಎರಡು ಸುಧಾರಕರ ವೀರ ಮರಣದಿಂದ ಭಾರತದ ಸ್ಲಾಮೀ ನವೋತ್ಥಾನ ಹೋರಾಟದ ಉಜ್ವಲ ಅಧ್ಯಾಯವೊಂದು ಕೊನೆಗೊಂಡಿತು.

## ವಿಫಲ ಹೋರಾಟಗಳು

ಬ್ರಿಟಿಷ್ ಸಾಮ್ರಾಜ್ಯಶಾಹಿತ್ವದ ವಿರುದ್ಧ ಮುಸ್ಲಿಮರೇ ಪ್ರಥಮವಾಗಿ ಹೋರ ಕ್ಕಿಳಿದಿದ್ದರು. ಅದಕ್ಕೆ ಮುಸ್ಲಿಮರ ಮನದಲ್ಲಿ ತುಂಬಿದ್ದ ಸ್ವಾತಂತ್ರ್ಯ ಪ್ರಜ್ಞೆಯೇ ಕಾರಣವಾಗಿ ಅದಲ್ಲದೆ ಬ್ರಿಟಿಷರು ಮೊಗಲರಿಂದ ಆಡಳಿತವನ್ನು ಕಸಿದುಕೊಂಡಿದ್ದುದರಿಂದ ಮುಸ್ಲಿಮ ಆ ವಿದೇಶಿ ಆಧಿಪತ್ಯದ ಬಗ್ಗೆ ಹೆಚ್ಚಿನ ದ್ವೇಷವಿತ್ತು.

ಬ್ರಿಟಿಷರು ಬಂದು ನೆಲೆಸಿದ ಆರಂಭ ಹಂತದಲ್ಲಿಯೇ ಮುಸ್ಲಿಮ್ ನಾಯ ಮತ್ತು ವಿದ್ವಾಂಸರು ಅದನ್ನು ವಿರೋಧಿಸಿದ್ದರು. ಶಾ ವಲಿಯುಲ್ಲಾ ದೆಹ್ಲವಿಯವರ ಹಿರಿ ಪುತ್ರ ಅಬ್ದುಲ್ ಅಝೀಝ್ ದೆಹ್ಲವಿ ಭಾರತವು ಯುದ್ಧ ಭೂಮಿ (ದಾರುಲ್ ಹಬ್ ಎಂದು ಸಾರಿದರು. ಈ ಫತ್ವಾ ಮುಸ್ಲಿಮರ ಹೋರಾಟ ಸ್ಫೂರ್ತಿಯನ್ನು ಹೆಚ್ಚಿಸಿ ಅದರೊಂದಿಗೆ ಸಯ್ಯಿದ್ ಅಹ್ಮದ್‌ರ ಅನುಯಾಯಿಗಳಾಗಿದ್ದ ವಿಲಾಯತ್ ಅಲಿ ಮ ಇನಾಯತ್ ಅಲಿಯವರು ಸಕ್ರಿಯವಾಗಿ ಹೀಗೆ ಸಾರಿದರು; "ಅವಿಶ್ವಾಸಿಗಳಾಗಿದ್ದ ಬ್ರಿಟಿ ವಿರುದ್ಧ ಒಗ್ಗಟ್ಟಾಗಬೇಕಾದುದು ಪ್ರತಿಯೊಬ್ಬ ಮುಸ್ಲಿಮರ ಕರ್ತವ್ಯವಾಗಿದೆ. ಅ ಹಿಂಜರಿಯುವವರು ರಾಷ್ಟ್ರದಿಂದ ತೊಲಗಲಿ." ಇದು ಬ್ರಿಟಿಷ್ ವಿರೋಧಿ ಮನೋಭಾವವ ಕೆರಳಿಸಿತು. (Ram Gopal, Indian Muslims, A Political History P:2

ಮೌಲವಿ ಶರೀಅತುಲ್ಲಾ ಮತ್ತು ಪುತ್ರ ದಾತುಮಿಯವರ ನೇತೃತ್ವದಲ್ಲಿ ಬಂಗಾ ಫರಾಯಿಸಿ ಆಂದೋಲನವೂ ಬ್ರಿಟೀಷರ ವಿರುದ್ಧ ಧರ್ಮ ಯುದ್ಧ ಸಾರಿತು. ಹಾಗೆಂ ನಾಸಿರ್ ಅಲಿ ನಡೆಸಿದ ಜಾಗೀರುದಾರೀ ವಿರುದ್ಧ ಸಮರವೂ ಸಾಮ್ರಾಜ್ಯಶಾಹಿತ್ವವ ಗುರಿಯಾಗಿರಿಸಿತ್ತು.

1857ರ ಪ್ರಥಮ ಸ್ವಾತಂತ್ರ್ಯ ಸಮರದಲ್ಲಿ ಮುಸ್ಲಿಮರು ಪ್ರಮುಖ ಪ ವಹಿಸಿದ್ದರು. ಫೈಝಾಬಾದ್‌ನ ಮೌಲವಿ ಅಹ್ಮದುಲ್ಲಾ ಶರೀಫ್ ಮತ್ತು ದೆಹಲಿ ಪ್ರಮುಖ ವಿದ್ವಾಂಸ ಫಝ್ಲುಲ್ ಹಕ್ ಖೈರಾಬಾದ್ ನೀಡಿದ ಫತ್ವಗಳು ಮುಸ್ಲಿ ಸಿಪಾಯಿಗಳು ಮತ್ತು ಜನಸಾಮಾನ್ಯರನ್ನು ಹೋರಾಟಕ್ಕೆ ಪ್ರೇರೇಪಿಸಿತ್ತು. ಸೂಫಿ ಪ್ರಚಾ ಮೌಲವಿ ಅಹ್ಮದುಲ್ಲಾ ಬ್ರಿಟೀಷ್ ವಿರೋಧಿ ಹೋರಾಟದ ನಾಯಕತ್ವ ವಹಿಸಿದ ಆದ್ದರಿಂದಲೇ ಅವರನ್ನು ಸೆರೆ ಹಿಡಿಯುವವರಿಗೆ ಅಥವಾ ಕೊಲ್ಲುವವರಿಗೆ ಬ್ರಿಟೀ ಸರಕಾರವು 50,000 ರೂಪಾಯಿ ಬಹುಮಾನವನ್ನು ಘೋಷಿಸಿತ್ತು. ಫಝ್ಲುಲ್ ಹ ಖೈರಾಬಾದಿಯವರ ಅಧ್ಯಕ್ಷತೆಯಲ್ಲಿ ದೆಹಲಿಯಲ್ಲಿ ಸೇರಿದ ಖ್ಯಾತ ವಿದ್ವಾಂಸರು ಪ್ರತಿಯೊ ಮುಸ್ಲಿಮನೂ ಬ್ರಿಟಿಷರ ವಿರುದ್ಧ ಶಸ್ತ್ರಧಾರಿಗಳಾಗಬೇಕೆಂದು ಕರೆ ನೀಡಿದ್ದರು. ಮೌಲಾ ಇಮಾದುಲ್ಲಾ ಅಬ್ದುಲ್ ಜಲೀಲ್, ಲಿಯಾಕತ್ ಅಲಿ, ಗುಲಾಮ್ ಹುಸೈನ್ ಮುಂತಾದವ 1857ರ ಸಿಪಾಯಿ ದಂಗೆಯ ನಾಯಕತ್ವ ವಹಿಸಿದ್ದರು.

ಆದ್ದರಿಂದಲೇ, ಮಹಮ್ಮದೀಯರೇ ಗಲಭೆ ಆರಂಭಿಸಿದ್ದೆಂದು ಬ್ರಿಟೀಷ್ ಅಧಿಕಾರಿ, ಮ್ಸ್ ಒಟ್ರಾಮ್‌ರೂ, ಮಹಮ್ಮದೀಯ ಯೋಧರು ಮತ್ತು ಜನಸಾಮನ್ಯರು ದೂಗಳಿಗಿಂತ ಹೆಚ್ಚು ವೈರ ಹೊಂದಿದ್ದರೆಂದೂ ಪಂಜಾಬಿನ ಕಮಿಶನರ್ ಸರ್ ಜೋನ್ಸ ರೆನ್ಸ್‌ರೂ ಹೇಳಿದ್ದಾರೆ. (History of Indian Muslims Vol. 11 P: 27, 355)

ಮೊಗಲ್ ಆಡಳಿತದ ಮರು ಸ್ಥಾಪನೆಗಾಗಿ ನಡೆದ ಈ ಎಲ್ಲಾ ಹೋರಾಟಗಳು ಫಲಗೊಂಡಿದ್ದವು. ಇದರಿಂದ ಮುಸ್ಲಿಮರಲ್ಲಿ ತೀವ್ರ ಆಶಾಭಂಗವಾಯಿತು. ಅದರೊಂದಿಗೆ ಟೀಷರೂ ಮುಸ್ಲಿಮ್ ವಿರೋಧಿ ಧೋರಣೆಯನ್ನು ಕೈಗೊಂಡರು. ಕಾರ್ನ್‌ವಾಲಿಸ್ ರೆಯ ಶಾಶ್ವತ ಭೂ ತೆರಿಗೆ ಪದ್ಧತಿಯಿಂದಾಗಿ ಧಾರ್ಮಿಕ ಸಂಸ್ಥೆಗಳ ನಿರ್ವಹಣೆಗಾಗಿ ಡಲಾಗಿದ್ದ ಸೊತ್ತಿನ ಮಾಲಕತ್ವವನ್ನು ಮುಸ್ಲಿಮರು ಕಳಕೊಂಡರು. ಬ್ರಿಟೀಷರು ಪರ್ಷಿಯನ್ ಷೆಯ ಮೇಲೆ ನಿಯಂತ್ರಣ ಹೇರಿ ಶರೀಅತ್ ಕಾನೂನುಗಳನ್ನು ರದ್ದು ಪಡಿಸಿದರು. ಫ್ಫಿ ಸೊತ್ತುಗಳ ನಿಯಂತ್ರಣದಿಂದ ಧಾರ್ಮಿಕ ಸಂಸ್ಥೆಗಳಿಗೆ ಅಡಚಣೆಯಾಯಿತು. ಈ ಂದರೆ-ಬಿಕ್ಕಟ್ಟುಗಳು ಮುಸ್ಲಿಮರ ಧೈರ್ಯ ಕುಂದಿಸಿ ಅವರಲ್ಲಿ ನಿರಾಶೆ ಹುಟ್ಟಿಸಿದವು.

## ಲಾಫತ್ ಚಳವಳಿಯ ಪತನ

ಉಸ್ಮಾನಿಯಾ ಖಿಲಾಫತ್‌ನ ನಾಶಕ್ಕೆ ಪ್ರಯತ್ನಿಸುತ್ತಿದ್ದ ಬ್ರಿಟನ್‌ನ ಧೋರಣೆಯ ರುದ್ಧ ಭಾರತದಲ್ಲಿ ತೀವ್ರ ಚಳವಳಿ ಆರಂಭವಾಯಿತು. ಖಿಲಾಫತನ್ನು ಭದ್ರಗೊಳಿಸಿ ುಸ್ಲಿಮರ ಪುಣ್ಯ ಕ್ಷೇತ್ರಗಳನ್ನು ರಕ್ಷಿಸುವುದೇ ಅದರ ಉದ್ದೇಶವಾಗಿತ್ತು. ಮೌಲಾನಾ ಬ್ದುಲ್ ಬಾರಿ, ಮೌಲಾನಾ ಮಹ್ಮೂದ್ ಹಸನ್ ಮತ್ತು ಉಬೈದುಲ್ಲಾ ಸಿಂಧಿಯವರು ಕಿಸಿದ 'ಜಮ್‌ಯಿಯತ್ತುಲ್ ಅನ್ಸಾರ್', ಅಬ್ದುಲ್ ಬಾರಿ, ಮೌಲಾನಾ ಇನಾಯತುಲ್ಲಾ, | ಎಮ್. ಎ. ಅನ್ಸಾರಿ, ಮತ್ತು ಅಲಿ ಸಹೋದರರು ಸೇರಿ ರಚಿಸಿದ 'ಅಂಜುಮನ್ ದ್ದಾಮೆ ಕಲ್‌ಬಾ', ಮುಸ್ಲಿಮ್ ಜನಸಾಮಾನ್ಯರನ್ನು ಖಿಲಾಫತ್ ಚಳವಳಿಗೆ ಪ್ರೇರೇಪಿಸಿತು. ಳವಳಿಯಲ್ಲಿ ವಿದ್ವಾಂಸರ ನಾಯಕತ್ವ ಮತ್ತು ಪಾತ್ರವನ್ನು ಬಲಪಡಿಸಲಿಕ್ಕಾಗಿ ಅಬ್ದುಲ್ ರಿಯವರು ದೇವ್‌ಬಂದ್ ಮತ್ತು ಫಿರಂಗಿ ಮೊಹಲ್ಲಾದ ವಿದ್ವಾಂಸರನ್ನು ಸೇರಿಸಿ 19ರಲ್ಲಿ ಜಮ್‌ಯಿಯತ್ತುಲ್ ಉಲೆಮಾಯೆ ಹಿಂದ್ ಸ್ಥಾಪಿಸಿದರು. ಗಾಂಧೀಜಿಯವರು ತ್ತು ಕಾಂಗ್ರೆಸ್ ಪಕ್ಷವು ಖಿಲಾಫತ್ ಚಳವಳಿಗೆ ಮುಕ್ತ ಬೆಂಬಲ ನೀಡಿತು. ಅದರೊಂದಿಗೆ ೌಲಾನಾ ಝಫರ್ ಅಲಿಖಾನ್‌ರ 'ಝಮಿನ್ದಾರ್' ಮೌಲಾನಾ ಮಹಮ್ಮದಲಿಯವರ ಮ್‌ದರ್ದ್', ಮೌಲಾನಾ ಆಝಾದ್‌ರ 'ಹಿಲಾಲ್' ಮುಂತಾದ ಉರ್ದು ಪತ್ರಿಕೆಗಳೂ ಮ್ರೇಡ್' ಎಂಬ ಇಂಗ್ಲೀಷ್ ಪತ್ರಿಕೆಯೂ ಖಿಲಾಫತ್ ಚಳವಳಿಯ ಬಲವನ್ನು ೃದ್ಧಿಸಿದವು.

ಹೀಗೆ ಭಾರತೀಯ ಮುಸ್ಲಿಮರು ಸಂಪೂರ್ಣವಾಗಿ ಖಿಲಾಫತ್‌ನ ರಕ್ಷಣೆಗೆ ೊರಟರು. ಅದರಿಂದ ಭುಗಿಲೆದ್ದ ತೀವ್ರ ಭಾವನೆಯು ಬ್ರಿಟೀಷ್ ವಿರೋಧಿ ಭಾವನೆಯನ್ನು

ಬಲಪಡಿಸಿದರೂ ಅಂತಿಮವಾಗಿ ಅದು ಕೂಡಾ ಮುಸ್ಲಿಮರನ್ನು ಧೈರ್ಯಗೆಡಿಸ
ಕಾರಣವಾಯಿತು. ಭಾರತೀಯ ಮುಸ್ಲಿಮರು ಯಾವ ಖಿಲಾಫತ್‌ನ ರಕ್ಷಣೆಗಾ
ಹೋರಾಡಿದ್ದರೋ ಅದು ಅದರ ಮೂಲ ಕೇಂದ್ರದ ಜನರಿಗೆ ಬೇಡವಾಗಿತ್ತು. 1924ರ
ಮುಸ್ತಫಾ ಕಮಾಲ್ ಪಾಶಾ ಕೇವಲ ಒಂದು ಘೋಷಣೆಯಿಂದ ಅದನ್ನು ಅಳಿಸಿ ಬಿಟ್ಟ
ಅದು ಮುಸ್ಲಿಮರ ಧೈರ್ಯ ಮತ್ತು ಶಕ್ತಿಯನ್ನು ಕುಂದಿಸಿತು. ಸರ್ವ ನಾಶವಾಯಿತೆಂ
ಭಾವನೆಯಿಂದ ಅವರು ದುರ್ಬಲರಾದರು. ಅದರೊಂದಿಗೆ ಖಿಲಾಫತ್ ಚಳವಳಿ
ಕಾಲದಲ್ಲಿದ್ದ ಸುಧೃಡವಾದ ಹಿಂದೂ-ಮುಸ್ಲಿಮ್ ಐಕ್ಯವೂ ಶಿಥಿಲವಾಯಿತು.

## ಕೋಮುವಾದದ ಬೆಳವಣಿಗೆ

ಹಿಂದೂ ನವೋತ್ಥಾನಕ್ಕಾಗಿ ಸ್ವಾಮಿ ದಯಾನಂದ ಸರಸ್ವತಿ ಆರಂಭಿಸಿದ ಆಯ
ಸಮಾಜವು ಜನರಲ್ಲಿ ಗುಂಪುಗಾರಿಕೆ ಮತ್ತು ಕೋಮು ಭಾವನೆಯನ್ನು ಮೊದಲೇ ಬೆಳೆಸಿತ್ತು
ಆದರೂ 1920ರ ಬಳಿಕ ಸಾಮುದಾಯಿಕ ಧ್ರುವೀಕರಣ ಮತ್ತು ಕೋಮುವಾ
ಬಲಿಯಲಾರಂಭಿಸಿತು. ವಿ.ಡಿ. ಸಾವರ್ಕರ್ 'ಹಿಂದೂ ಮಹಾಸಭಾ'ದ ನಾಯಕರಾದ ಬ
ಅದು ಮತ್ತಷ್ಟು ತೀವ್ರಗೊಂಡಿತು. 1923ರಲ್ಲಿ 'ಯಾರು ಹಿಂದೂ' ಎಂಬ ಅ
ಉದ್ರೇಕಕಾರಿ ವಿಷಲಿಪ್ತ ಪುಸ್ತಕ ಪ್ರಕಟಗೊಂಡಿತು. 1925ರಲ್ಲಿ ಸ್ವಾಮಿ ಶ್ರದ್ಧಾನಂದ
ನಾಯಕತ್ವದಲ್ಲಿ ಶುದ್ಧಿ ಚಳವಳಿ ಆರಂಭಗೊಂಡಿತು. ಮುಸ್ಲಿಮರನ್ನು ಶುದ್ಧಗೊಳಿಸಿ ಹಿಂದ
ಧರ್ಮಕ್ಕೆ ಸೇರಿಸುವುದು ಅಥವಾ ಪೂರ್ವ ಧರ್ಮಕ್ಕೆ ಮರಳಿಸುವುದೇ ಅವರ ಧ್ಯೇಯವಾಗಿತ
ಇದು ಸಮುದಾಯದಲ್ಲಿ ತೀವ್ರ ಘರ್ಷಣೆಗೆ ಹೇತುವಾಯಿತು. ತನ್ನಿಮಿತ್ತ 1926ರ
ಸ್ವಾಮಿ ಶ್ರದ್ಧಾನಂದರ ಹತ್ಯೆಯಾಯಿತು. ಇದರಿಂದ ಕೋಮುವಾದ ಇನ್ನಷ್ಟು ಬಲಿಷ್ಠಗೊಂಡಿ
ಈ ಘಟನಾವಳಿಯಿಂದ ಪ್ರಯೋಜನ ಪಡೆಯಲು 'ಸ್ವಯಂ ಸೇವಕ ಸಂಘ'ವೂ ಸಕ್ರಿ
ಗೊಂಡಿತು. 1925ರ ಸೆಪ್ಟಂಬರ್ 27ರಂದು ವಿಜಯದಶಮಿಯ ದಿನ ನಾಗ್ಪುರದಲ್ಲಿ ಕೇಶ
ಬಲರಾಮ್ ಹೆಗ್ಡೆವಾರ್ 'ರಾಷ್ಟ್ರೀಯ ಸ್ವಯಂ ಸೇವಕ ಸಂಘ'ವನ್ನು ಸ್ಥಾಪಿಸಿದರ
ಭಾರತೀಯ ಜನತೆಯು ಬ್ರಿಟೀಷರ ವಿರುದ್ಧ ಹೋರಾಟಕ್ಕೆ ನಿಂತಿದ್ದ ಆ ಹಂತದಲ್ಲಿಯ
ಮುಸ್ಲಿಮರನ್ನು ಎದುರಿಸಲಿಕ್ಕಾಗಿ ಆರೆಸ್ಸೆಸ್ ಆಯುಧ ತರಬೇತಿ ನೀಡುತ್ತಿತ್ತು. ಆ ಕುರಿ
ಕೆ. ಆರ್. ಮಲ್ಕಾನಿಯವರು 'ಸಂಘ ಕಥೆ' ಎಂಬ ಕೃತಿಯಲ್ಲಿ ಹೀಗೆ ಬರೆದಿದ್ದಾರೆ. "ನಾಗ್
ಮುಸ್ಲಿಮರ ಅಕ್ರಮ ಸ್ವಭಾವವನ್ನು ಎದುರಿಸಲಿಕ್ಕಾಗಿ ಹಿಂದೂಗಳ ಒಂದು ತಂಡವು ಶಸ್ತ್ರ
ಬಳಕೆಯ ತರಬೇತಿ ಆರಂಭಿಸಿತು."

1927ರ ಎಪ್ರಿಲ್ 15ರಿಂದ ಜೂನ್ 15ರ ತನಕ ನಾಗ್ಪುರದಲ್ಲಿ ಏರ್ಪಡಿಸಿ
ಆರೆಸ್ಸೆಸ್ ತರಬೇತಿ ಶಿಬಿರ ಮುಗಿದ ಬಳಿಕ ನಗರದಲ್ಲಿ ಭೀಕರ ಗಲಭೆ ಸ್ಫೋಟಿಸಿ
ತರುವಾಯ ದೇಶದ ನಾನಾ ಕಡೆಗಳಲ್ಲಿ ಹಿಂದೂ ಮುಸ್ಲಿಮ್ ಘರ್ಷಣೆ ಮತ್ತು ರ

ಗಲಭೆ ಭುಗಿಲೆದ್ದಿತು. 1936ರಲ್ಲಿ ಗೋಳ್ವಾಲ್ಕರ್ ಬರೆದ 'ನಮ್ಮ ರಾಷ್ಟ್ರೀಯತೆಯ ಖ್ಯಾನ' ಎಂಬ ಕೃತಿಯಲ್ಲಿ ಭಾರತೀಯ ಮುಸ್ಲಿಮರನ್ನು ಪರಕೀಯರು ಮತ್ತು ರಾಷ್ಟ್ರ ಕ್ತಿಯಿಲ್ಲದವರೆಂದು ಚಿತ್ರಿಸಲಾಯಿತು. ಭಾರತೀಯ ಸಂಸ್ಕೃತಿಯು ಹಿಂದೂ ರಾಷ್ಟ್ರೀಯತೆಯ ನಾದಿಯಲ್ಲಿದೆಯೆಂದು ಅವರು ವಾದಿಸಿದರು. ಈ ಕಾರಣಗಳಿಂದಾಗಿ ಸಮುದಾಯ ವೀಕರಣ ಮತ್ತು ಕೋಮುವಾದ ಅನಿಯಂತ್ರಿತವಾಗಿ ಬೆಳೆಯಿತು.

## ಕಿಸ್ತಾನ್ ವಾದ

ಭಾರತದಲ್ಲಿ ದ್ವಿರಾಷ್ಟ್ರವಾದವನ್ನು ಪ್ರಥಮವಾಗಿ ಉಗ್ರ ಹಿಂದೂ ರಾಷ್ಟ್ರವಾದಿಗಳು ಪಾದಿಸಿದ್ದರು. 1937ರಲ್ಲಿ ಹೈದರಾಬಾದ್‌ನಲ್ಲಿ ಜರಗಿದ ಹಿಂದೂ ಮಹಾ ಸಭಾ ಮ್ಮೇಳನದ ಅಧ್ಯಕ್ಷತೆ ವಹಿಸಿದ ವೀರ ಸಾರ್ವರ್ಕರ್ ಹೀಗೆ ಸಾರಿದ್ದರು; ಭಾರತವು ರ್ಥಾ ಒಂದೇ ರಾಷ್ಟ್ರವಾಗಿರಲು ಸಾಧ್ಯವಿಲ್ಲ. ತದ್ವಿರುದ್ಧವಾಗಿ ಭಾರತದಲ್ಲಿ ಮುಖ್ಯವಾಗಿ ಡು ರಾಷ್ಟ್ರಗಳಿವೆ, ಹಿಂದೂ ಮತ್ತು ಮುಸ್ಲಿಮ್.

ಹಿಂದೂ ರಾಷ್ಟ್ರೀಯವಾದ ಮತ್ತು ಕೋಮುವಾದದ ಬೆಳವಣಿಗೆಯಿಂದ ಮುಸ್ಲಿಮರ ಮುದಾಯಿಕ ಭಾವನೆಯೂ ಬಲಗೊಂಡಿತು. ಮುಸ್ಲಿಮ್ ರಾಷ್ಟ್ರೀಯತೆಯ ರಕ್ಷಣೆಗಾಗಿ ತ ರಾಷ್ಟ್ರ ಬೇಕೆಂಬ ವಿಚಾರ ಬೆಳೆಯಿತು. ಸರ್ ಸಿಕಂದರ್ ಹಯಾತ್ ಖಾನ್, ಪ್ರೊ ಮ್ಮದ್ ಝಫರುಲ್ ಹಸನ್, ಹಸನ್ ಯಾದಿರಿ ಮುಂತಾದವರು ಅದರ ಆರಂಭ ಕಾಲದ ತಾರರಾಗಿದ್ದರು. 1940ರಲ್ಲಿ ಮುಸ್ಲಿಮ್ ಲೀಗ್‌ನ ಲಾಹೋರ್ ಸಮ್ಮೇಳನದಲ್ಲಿ ಆ ಡಿಕೆಯ ಗೊತ್ತುವಳಿಯನ್ನು ಮಂಡಿಸಲಾಯಿತು. ಹಿಂದೂ ಬಹುಸಂಖ್ಯಾತ ಪ್ರಾಂತ್ಯಗಳನ್ನು ದೂ ರಾಷ್ಟ್ರವೆಂದೂ ಮುಸ್ಲಿಮ್ ಬಹುಸಂಖ್ಯಾತ ಪ್ರಾಂತ್ಯಗಳನ್ನು ಮುಸ್ಲಿಮ್ ರಾಷ್ಟ್ರವೆಂದೂ ಗಣಿಸಬೇಕೆಂದು ಸೂಚಿಸಲಾಗಿತ್ತು. ಅಂದು ಕಾಂಬ್ರಿಡ್ಜ್ ವಿದ್ಯಾರ್ಥಿಯಾಗಿದ್ದ ಚೌಧರಿ ಹ್ಮತ್ ಅಲಿಯವರು ಮುಸ್ಲಿಮ್ ರಾಷ್ಟ್ರಕ್ಕೆ ಪಾಕಿಸ್ತಾನವೆಂಬ ಹೆಸರಿಟ್ಟರು. ಹೀಗೆ 40ರಲ್ಲಿ ಹಿಂದೂ ಕೋಮುವಾದ ಮತ್ತು ಮುಸ್ಲಿಮ್ ಜನಾಂಗೀಯತೆಯು ಏಕ ಪ್ರಕಾರ ಗೊಂಡಿತು. ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ಕೋಮುಸಂಘಟನೆಯಾಗಿರದಿದ್ದರೂ ಲಗಂಗಾಧರ ತಿಲಕ್, ಬಿಪಿನ್ ಚಂದ್ರಪಾಲ್, ಲಾಲಾ ಲಜಪತ್‌ರಾಯ್ ಮುಂತಾದ ದುತ್ವವಾದಿಗಳು ಆರಂಭದಿಂದಲೇ ಅದನ್ನು ತಮ್ಮ ಅಧೀನವಿರಿಸಲು ಪ್ರಯತ್ನಿಸುತ್ತಿದ್ದರು. ಲಗಂಗಾಧರ ತಿಲಕರು ಕಟ್ಟಾ ಜಾತಿವಾದಿಯೂ ಲಾಲಾ ಲಜಪತ್‌ರಾಯ್ ಹಿಂದೂ ಹಾ ಸಭಾದ ಸದಸ್ಯರೂ ಆಗಿದ್ದರು. 40ರ ದಶಕದಲ್ಲಿ ಸರ್ದಾರ್ ವಲ್ಲಭ ಭಾಯ್ ಟೇಲ್‌ರಂಥವರು ಆ ವಿಚಾರಧಾರೆಯ ಮುಂದಾಳುಗಳಾಗಿದ್ದರು.

ಪಾಕಿಸ್ತಾನವಾದದ ಬೆಳವಣಿಗೆಯಿಂದ ಮುಸ್ಲಿಮರಲ್ಲಿ ತೀವ್ರ ಜನಾಂಗೀಯ ಭಾವನೆ ಕ್ಕಿತು. ಅವರಲ್ಲಿ ವಿಶ್ವಾಸ ಪ್ರಜ್ಞೆ ಇಲ್ಲವಾಯಿತು. ಒಳಿತು-ಕೆಡುಕುಗಳ ಬಗ್ಗೆ ವಿವೇಚನೆಯೂ

ನಾಸ್ತಿಯಾಯಿತು. ಅರಬಿ ಹೆಸರಿರುವವರು ಮಾಡಿದ್ದೆಲ್ಲ ಸರಿ, ಇತರರು ಮಾಡಿದ್ದೆಲ್ಲ ತಪ್ಪೆಂ ಮಾನದಂಡ ವ್ಯಾಪಕವಾಯಿತು. ತತ್ವ ನಿಷ್ಠೆ ಇಲ್ಲದ ಜನಾಂಗೀಯ ಭಾವನೆ ಮತ ಜನಾಂಗವಾದವು ಮುಸ್ಲಿಮರನ್ನು ಇಸ್ಲಾಮಿನಿಂದ ದೂರ ಸರಿಸಿತು. ಇದರಿಂದಾಗಿ ಇಸ್ಲಾಮಿ ಬಗ್ಗೆ ಮುಸ್ಲಿಮೇತರರಲ್ಲಿ ತಪ್ಪು ಭಾವನೆಯೂ ಹಬ್ಬಿತು.

ಇಸ್ಲಾಮಿನ ಬಿಲ್ಲೆಯಲ್ಲಿ ಸ್ಥಾಪಿಸಲಾಗುವ ಪಾಕಿಸ್ತಾನವು ಮುಸ್ಲಿಮ್ ರಾಷ್ಟ್ರವಾದೀ ವಿನಾ ಇಸ್ಲಾಮಿ ರಾಷ್ಟ್ರವಾಗಲಾರದೆಂದು ಅದರ ವಕ್ತಾರರನ್ನು ನೋಡಿದರೆ ವ್ಯಕ್ತವಾಗುತ್ತಿತ ಆದ್ದರಿಂದಲೇ ಇಸ್ಲಾಮಿ ವಿದ್ವಾಂಸರು ಅದನ್ನು ಬಲವಾಗಿ ವಿರೋಧಿಸಿದ್ದರು. 1940ರ ಜೋದ್ಪಾಪುರ್‌ದಲ್ಲಿ ಜರಗಿದ 'ಜಮ್‌ಯಿಯತುಲ್ ಉಲೆಮಾ ಹಿಂದ್' ಸಮ್ಮೇಳನದ ಅಧ್ಯಕ್ಷತೆ ವಹಿಸಿದ ಮೌಲಾನಾ ಹುಸೈನ್ ಅಹ್ಮದ್ ಮದನಿಯವರು ಹೀಗೆ ಹೇಳಿದ್ದ "ಇಂದು ಪಾಕಿಸ್ತಾನ ಆಂದೋಲನವು ಎಲ್ಲರ ಬಾಯಲ್ಲಿದೆ. ಮುಸ್ಲಿಮ್ ಬಹುಸಂಖ್ಯಾ ಪ್ರಾಂತ್ಯಗಳಲ್ಲಿ ಇಸ್ಲಾಮಿ ಕಾನೂನಿನನ್ವಯ ಪ್ರವಾದಿಯವರ(ಸ) ಮಾದರಿಯ ಆಡ ಸ್ಥಾಪಿಸುವುದಿದ್ದರೆ ಅದು ಅಭಿನಂದನಾರ್ಹ ಯೋಜನೆಯಾಗಿದೆ. ಯಾವೊಬ್ಬ ಮುಸ್ಲಿಮ ಅದನ್ನು ವಿರೋಧಿಸಲಾರ. ಆದರೆ ಬ್ರಿಟೀಷರ ನಿಯಂತ್ರಣದಲ್ಲಿರುವ ಯಾವುದಾದರೊಂ ಸರಕಾರವನ್ನು ಸ್ಥಾಪಿಸಿ ಅದನ್ನು ಇಸ್ಲಾಮಿ ಸರಕಾರವೆಂದು ಕರೆದರೆ ಆ ಯೋಜನೆ ಹೇಡಿತನ ಮತ್ತು ಮೌಲ್ಯ ಹೀನವಾದುದಾಗಿದೆ." ಪಾಕಿಸ್ತಾನ್‌ವಾದಿಗಳು ಪಾಶ್ಚಾತ್ಯ ಲೌ ಸಿದ್ಧಾಂತಗಳನ್ನು ಜಾರಿಗೊಳಿಸುವ ಮತ್ತು ಬ್ರಿಟೀಷ್ ಮನೋಭಾವವಿರುವ ಮುಸ್ಲಿಮ ನಾಯಕತ್ವ ವಹಿಸುವ ರಾಷ್ಟ್ರವೊಂದರ ಸ್ಥಾಪನೆಯನ್ನು ಗುರಿಯಾಗಿರಿಸಿದ್ದರು. ಆದ್ದರಿ ಪ್ರಮುಖ ಇಸ್ಲಾಮಿ ವಿದ್ವಾಂಸರೂ ಗಣ್ಯ ವ್ಯಕ್ತಿಗಳೂ ಅದನ್ನು ವಿರೋಧಿಸಿದ್ದ ಹಾಗಿದ್ದರೂ ಸಮುದಾಯದ ಬಹುತೇಕ ಜನರು ಜಾತ್ಯತೀತ ಸಮುದಾಯ ನಾಯ ಜೊತೆಗೂಡಿದರು. ಇದು 1940ರಲ್ಲಿ ಭಾರತದಲ್ಲಿ ಇಸ್ಲಾಮ್ ಎದುರಿಸಿದ ಅತಿ ಗಂಭೀ ಸಮಸ್ಯೆಯಾಗಿತ್ತು.

## ಅಲೀಗಢ ಮತ್ತು ದೇವುಬಂದ್

ಸರ್ ಸೈಯದ್ ಅಹ್ಮದ್‌ಖಾನ್‌ರು ಬ್ರಿಟೀಷ್ ಪರ ಧೋರಣೆಯನ್ನು ತಳೆದಿದ್ದ ಕಾಂಗ್ರೆಸ್‌ನಿಂದ ಮುಸ್ಲಿಮರಿಗೆ ಹಿತವಿಲ್ಲ, ಆದಕಾರಣ ಮುಸ್ಲಿಮರು ಕಾಂಗ್ರೆಸ್ ಸೇರಬಾರದೆ ಅವರು ಉಪದೇಶಿಸಿದ್ದರು. ಧರ್ಮ ನವೀಕರಣ ವಿಚಾರಧಾರೆಯ ಸರ್ ಸೈಯದ ಖಿಲಾಫತ್ ಚಳವಳಿ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ಮುಸ್ಲಿಮರು ಭಾಗವಹಿಸುವುದ ವಿರೋಧಿಸಿದರು. ಇದರಿಂದ ಮುಸ್ಲಿಮ್ ನಾಯಕರು ಮತ್ತು ವಿದ್ವಾಂಸರು ಅವರಿ ದೂರವಾದರು. ಸರ್ ಸೈಯದ್ ಲೌಕಿಕ ವಾದಿಯೆಂದು ಅನೇಕರು ಭಾವಿಸಿದರು. ಏನಿದ್ದ ಅವರ ಮತ್ತು ವಿದ್ವಾಂಸರ ಅಂತರವು ಅವರು ಸ್ಥಾಪಿಸಿದ ಮಹಮ್ಮಡನ್ ಆಂ ಓರಿಯಂಟಲ್ ಕಾಲೇಜಿನ ಸ್ವಭಾವದ ಮೇಲೆ ತೀವ್ರ ಪರಿಣಾಮ ಬೀರಿತು. ಅನೇ

ಅಲೀಗಢ ವಾರ್ಸಿಟಿಯಾದ ಆ ಸಂಸ್ಥೆಯು ಪಾಶ್ಚಾತ್ಯ ವಿಚಾರಧಾರೆಯ ಪ್ರಚಾರ ಕೇಂದ್ರವಾಯಿತು. ಆ ಕಾಲದಲ್ಲಿ ಅಲೀಗಢದಲ್ಲಿ ಕಲಿತ ಅನೇಕ ಮಂದಿ ಮಿಸ್ಟರ್ ಮತ್ತು ಮಿಸ್ಸೆಸ್‌ಗಳು ಆಂಗ್ಲೊ ಮುಹಮ್ಮಡನ್ ವರ್ಗವೆನಿಸಿದ್ದರು. ಅವರಲ್ಲಿ ಹೆಚ್ಚಿನವರು ನಾಸ್ತಿಕ ಧರ್ಮ ನಿರಪೇಕ್ಷ ಆಂದೋಲನಗಳ ಕಾರ್ಯಕರ್ತರಾದರು. ಅಂದು ಅಲೀಗಢವು ಕಮ್ಯೂನಿಸಂಗೆ ಅತ್ಯಂತ ಕಾರ್ಯಕರ್ತರನ್ನು ಒದಗಿಸಿದ ಮುಸ್ಲಿಮ್ ಶಿಕ್ಷಣ ಸಂಸ್ಥೆಯಾಗಿತ್ತು. ವಾರ್ಸಿಟಿ ನ್ಯಾಯಾಲಯವೇ ಅವಳ ವ್ಯಕ್ತಪಡಿಸುವಷ್ಟರ ಮಟ್ಟಿಗೆ ಶಿಕ್ಷಣ ಸಂಸ್ಥೆಯು ಧರ್ಮ ವಿರೋಧಿಗಳ ಕೈ ಸೇರಿತು. ಆ ಕಾಲದಲ್ಲಿ ಅಲ್ಲಿ ಕಲಿಯುತ್ತಿದ್ದ ಓರ್ವ ವಿದ್ಯಾರ್ಥಿಯು ಬರೆದ ಪತ್ರದ ಒಕ್ಕಣೆಯಿಂದ ಈ ವಾಸ್ತವಿಕತೆಯನ್ನು ಗ್ರಹಿಸಬಹುದು. ಅಲೀಗಢದಲ್ಲಿ ನನಗೆ ಇಸ್ಲಾಮಿನ ಬಾಹ್ಯ ಹೊಡೆಯೊಂದಿಗೆ ಪಶ್ಚಿಮದ ಪರಮೋನ್ನತ ಸೀಮೆಯಾಗಿರುವ ಕಮ್ಯೂನಿಝುಮ್‌ನೊಂದಿಗೆ ವ್ಯವಹರಿಸಬೇಕಾಯಿತು. ಪಾಶ್ಚಾತೀಕರಣವು ಅಷ್ಟೊಂದು ಅಪಾಯಕಾರಿಯೆಂದು ನಾನು ಆ ತನಕ ಭಾವಿಸಿರಲಿಲ್ಲ. ಆದರೆ ಅಲೀಗಢದ ಅನುಭವಗಳು ನನಗೆ ವಾಸ್ತವಿಕತೆಯನ್ನು ಮನಗಾಣಿಸಿತು. ಮುಸ್ಲಿಮ್-ಭಾರತದ ಈ ನಾಡಿ ಕೇಂದ್ರದಲ್ಲಿ ಇಸ್ಲಾಮಿನಿಂದ ಭ್ರಷ್ಟರಾಗಿ (ಮುರ್ತದ್ದ್) ಕಮ್ಯುನಿಝುಮ್‌ನ ಸಕ್ರಿಯ ಪ್ರಚಾರಕರಾದ ಬಹುದೊಡ್ಡ ತಂಡವಿದೆ. ಅದರಲ್ಲಿ ಅಧ್ಯಾಪಕರೂ ಸೇರಿದ್ದಾರೆ. ಇವರು ಹೊಸತಾಗಿ ಬಂದ ಅರ್ಹ ವಿದ್ಯಾರ್ಥಿಗಳನ್ನು ಬುಟ್ಟಿಗೆ ಹಾಕುತ್ತಾರೆ. ಇವರ ಕಮ್ಯುನಿಝುಮ್ ಬಡವರು, ಕೃಷಿಕರು ಮತ್ತು ಕಾರ್ಮಿಕರ ಏಳಿಗೆಗಾಗಿರುವುದಲ್ಲ. ಏಕೆಂದರೆ ಇವರ ದುಷ್ಟ ಜೀವನ ವಿಧಾನವು ಅವರ ಮಾತಿನ ಪೊಳ್ಳುತನವನ್ನು ಬಹಿರಂಗ ಪಡಿಸುತ್ತದೆ. ಕಮ್ಯುನಿಝುಮ್ ಅವರ ಮಟ್ಟಿಗೆ ತಮ್ಮ ನೈತಿಕ ದೌರ್ಬಲ್ಯಗಳನ್ನೂ ಧರ್ಮನಿಷೇಧ ಮನೋಭಾವವನ್ನೂ ಕುಲಗೆಟ್ಟ ವಿಚಾರಧಾರೆಗಳನ್ನೂ ಮರೆಮಾಚುವ ಜಾಗತಿಕ ಆಂದೋಲನವಾಗಿದೆ.

ಒಮ್ಮೆ ನನ್ನನ್ನು ಕಮ್ಯುನಿಝುಮ್ ಆಕರ್ಷಿಸಿತ್ತು. ಅದು ಇಸ್ಲಾಮಿನ ಇನ್ನೊಂದು ರೂಪವೆಂದು ನಾನು ಭಾವಿಸಿದ್ದೆ. ಆದರೆ ಗಾಢ ಅಧ್ಯಯನದ ಬಳಿಕ ಅವು ಮೂಲಭೂತವಾಗಿ ಭಿನ್ನವೆಂಬುದು ವ್ಯಕ್ತವಾಯಿತು. (ಮೌಲಾನಾ ಸೈಯದ್ ಅಬುಲ್ ಅಲಾ ಮೌದೂದಿ 1936 ಆಗಸ್ಟ್-ಸೆಪ್ಟಂಬರ್ ತಿಂಗಳಲ್ಲಿ ಬರೆದ ಲೇಖನಗಳ ಸಂಗ್ರಹವಾಗಿರುವ 'ತನ್‌ಕೀಹಾತ್'ನಲ್ಲಿ ಈ ಪತ್ರವನ್ನು ಉದ್ಧರಿಸಿದ್ದಾರೆ.)

ಅಲೀಗಢವು ಕೇವಲ ಒಂದು ಶಿಕ್ಷಣ ಸಂಸ್ಥೆಯಾಗಿರಲಿಲ್ಲ. 1930-40ರ ದಶಕಗಳಲ್ಲಿ ಸಮುದಾಯದ ಉನ್ನತ ಮಟ್ಟದಲ್ಲಿ ಪ್ರಭಾವ ಹೊಂದಿದ್ದ ಗಣ್ಯ ವರ್ಗದ ವಿಚಾರಧಾರೆಯನ್ನು ಅದು ಪ್ರತಿನಿಧೀಕರಿಸುತ್ತು. ಅದು ಸಂಪೂರ್ಣ ಪಾಶ್ಚಾತ್ಯ ಮತ್ತು ಲೌಕಿಕವಾಗಿತ್ತು. ಇದರಿಂದಾಗಿ ಪಾಶ್ಚಾತ್ಯ ವಿಕೃತ ವಿಚಾರಧಾರೆ ಮತ್ತು ಸಾಂಸ್ಕೃತಿಕ ಮಾಲಿನ್ಯವು ಸಮುದಾಯದಲ್ಲಿ ವ್ಯಾಪಿಸಿತು.

ಇನ್ನೊಂದೆಡೆ, ದೇವು ಬಂದ್‌ನ (ದಾರುಲ್ ಉಲೂಮ್) ಧಾರ್ಮಿಕ ಶಿಕ್ಷ ಪ್ರತೀಕವಾಗಿ ನಿಂತಿತ್ತು. ಅದು ಸಂಪ್ರದಾಯವಾದಿ ಪ್ರತಿಗಾಮಿ ವಿಚಾರಧಾರೆಯ ಗರ್ಭಗ ಯಾಗಿತ್ತು. ಅಂತಹ ಸಂಸ್ಥೆಗಳಿಂದ ಹೊರ ಬರುವ ವಿದ್ವಾಂಸರು ಪ್ರಾಚೀನ ಗ್ರಂಥ ಅಕ್ಷರಗಳಲ್ಲಿ ಬಂಧಿತರಾದ ಅಂಧಾನುಕರಣೆಯ ಬಂಧಿಗಳಾಗಿದ್ದರು. ಅವರಿಗೆ ಕಾಲ ಮ ಲೋಕವೇನೆಂದು ತಿಳಿದಿರಲಿಲ್ಲ. ಅವರು ಇಂಗ್ಲಿಷ್ ನರಕದ ಭಾಷೆಯೆಂದು ಫತ್ವ ನೀಡಿದ ಅದನ್ನು ಕಲಿಸುವುದನ್ನು ಸಂಪೂರ್ಣವಾಗಿ ನಿಷೇಧಿಸಿದರು. ಅಲೀಗಢ ಪ್ರತಿನಿಧಿಸ ವಿದ್ಯಾವಂತರಾದರೋ ಮುಸ್ಲಿಮರು ಅರಬಿ ಲಿಪಿಗಳ ಬದಲಿಗೆ ರೋಮನ್ ( ಅಂಗೀಕರಿಸಬೇಕೆಂದು ವಾದಿಸಿದರು. ಸಂಪೂರ್ಣ ಭಿನ್ನವಾದ ಎರಡು ಧ್ರುವಗಳಲ್ಲಿ ನಿ ಲೋಕವರಿಯದ ಮುಲ್ಲಾಗಳೂ, ಧರ್ಮವರಿಯದ ಮಿಸ್ಟರ್‌ಗಳೂ ಪರಸ್ಪರ ದ್ವೇಷ, ಮ ಬೆಳೆಸಿದರು. ಮುಸ್ಲಿಮರು ಕಾಂಗ್ರೆಸ್‌ನಲ್ಲಿ ಸೇರಬಾರದೆಂದು ಸರ್ ಸೈಯದ್ ಅಹ್ಮದ್ ಹೇಳಿದರೆಂಬ ಕಾರಣಕ್ಕಾಗಿ ದೇವು ಬಂದ್‌ನ ವಿದ್ವಾಂಸ ರಶೀದ್ ಅಹ್ಮದ್ ಗಂಗೋಹಿಯ ಮುಸ್ಲಿಮರು ಕಾಂಗ್ರೆಸ್ ಸೇರಬೇಕೆಂದು ಒತ್ತಾಯಿಸಿದರು. ಸರ್ ಸೈಯದ್‌ರ 'ಪೆಟ್ರಿಯಾ ಎಸೋಸಿಯೇಶನ್'ನಲ್ಲಿ ಸೇರಬಾರದೆಂದು ಗಂಗೋಹಿ, ಮಹ್ಮೂದ್ ಹಸನ್ ಮುಂತ ನೂರು ಮಂದಿ ವಿದ್ವಾಂಸರು ಸಹಿ ಹಾಕಿದ ಪತ್ರವೂ ಹೊರ ಬಂತು. ವಸ್ತುಶಃ ಎರ ವಿಭಾಗವೂ ನೈಜ ಇಸ್ಲಾಮನ್ನು ಪ್ರತಿನಿಧಿಸುತ್ತಿರಲಿಲ್ಲ. ಆದ್ದರಿಂದ ಇಸ್ಲಾಮಿ ಚೇತ ಸಂಪ್ರದಾಯವಾದದ ಕತ್ತಲೆ ಕೋಣೆಗಳಲ್ಲಿಯೂ ಆಧುನೀಕರಣದ ಸ್ವಗತ ವೇದಿಕೆಗಳಲ್ಲಿಯ ನಿಶ್ಚಲವಾಯಿತು. ಇಸ್ಲಾಮಿ ಆತ್ಮ ಸಾಕ್ಷಿಯು ಹೆಪ್ಪುಗಟ್ಟಿದ ಸಮುದಾಯ ವ್ಯವಸ್ಥೆಯೊಳಗಿ ಹೊರಬರಲು ಹಂಬಲಿಸುತ್ತಿತ್ತು.

ಭಾರತದಲ್ಲಿ ಇಸ್ಲಾಮ್ ಅನುಭವಿಸಿದ ವಿಶಿಷ್ಟ ತೊಂದರೆ ಮತ್ತು ಬಿಕ್ಕಟ್ಟು ಸಾಮ್ರಾಜ್ಯಶಾಹಿಯ ವಾಸ್ತವ್ಯವು ಮುಸ್ಲಿಮ್ ಜಗತ್ತಿನಲ್ಲಿ ಸೃಷ್ಟಿಸಿದ ವಿಕೃತ ವಿಶ್ವಾಸ, ವಿ ದೃಷ್ಟಿಕೋನ, ಸಾಂಸ್ಕೃತಿಕ ದೋಷ, ದಿಗ್ಭ್ರಾಂತಿ, ಕೀಳರಿಮೆ, ತಪ್ಪಿತಸ್ಥ ಮನೋಭಾ ಪಾಶ್ಚಾತ್ಯ ವಿಧೇಯತೆ, ಲೌಕಿಕ ತತ್ವ ಸಿದ್ಧಾಂತಗಳ ಅತಿಕ್ರಮಣಗಳಿಂದ ಹೊರತಾ ಆದ್ದರಿಂದ ಅದು ಮಧ್ಯಮ ವರ್ಗದ ಇಸ್ಲಾಮಿ ನವೋತ್ಥಾನ ಚಳವಳಿಯ ಆರಂಭ ಅನಿವಾರ್ಯವಾಗಿದ್ದ ಕಾಲಘಟ್ಟವಾಗಿತ್ತು. ಈ ಹಿನ್ನೆಲೆಯಲ್ಲಿ ಸಂಪೂರ್ಣ ಪ್ರತಿಕ ಪರಿಸ್ಥಿತಿಯಲ್ಲಿ ಭಾರತ ಉಪ ಭೂ ಖಂಡದಲ್ಲಿ ಜಮಾಅತೆ ಇಸ್ಲಾಮಿ ರೂಪುಗೊ ಕಾರ್ಯಾರಂಭಿಸಿತು.



# III

# ಆಂದೋಲನ ನಾಯಕರ ರಂಗ ಪ್ರವೇಶ

ಸುಧಾರಕ ಯುಗ ಪುರುಷರ ಪರಿಶ್ರಮಗಳಿಂದ ಉಜ್ವಲ-ಕ್ರಾಂತಿ, ಉತ್ಕೃಷ್ಟ ಂದೋಲನ, ಪ್ರಬಲ ಸಾಮಾಜಿಕ ಬದಲಾವಣೆಗಳುಂಟಾಗುತ್ತದೆ. ಕಾಲ ಮತ್ತು ದೇಶಾತೀತರಾದ ಂತಹ ಮಹಾನ್ ವ್ಯಕ್ತಿಗಳನ್ನು ಯಾರಾದರೂ ವಿಶೇಷ ತರಬೇತಿ ನೀಡಿ ಬೆಳೆಸುವುದಲ್ಲ. ವಲಾಗಿ ಅಲ್ಲಾಹನು ಆತನ ಅಪಾರ ಅನುಗ್ರಹದಿಂದ ಸಮಾಜಕ್ಕೆ ಅವರನ್ನು ಕೊಡುಗೆ ಡುತ್ತಾನೆ.

ಇಂದು ಜಗತ್ತಿನಾದ್ಯಂತ ಕಂಡು ಬರುವ ಇಸ್ಲಾಮೀ ಜಾಗೃತಿಯ ಪ್ರಥಮ ಲೆಗಳನ್ನು ಭಾರತ ಉಪ ಭೂಖಂಡದಲ್ಲಿ ಸೈಯದ್ ಅಬುಲ್ ಆಲಾ ಮೌದೂದಿಯವರು ಬ್ಬಿಸಿದರು. ಪಾಶ್ಚಾತ್ಯ ಸವಾಲುಗಳಿಂದ ದಿಗ್ಭ್ರಾಂತವಾದ ಸಾಂಪ್ರದಾಯಿಕ ವಿಚಾರವನ್ನು ವರು ಪ್ರಚೋದಿಸಿ ಕಾರ್ಯದಕ್ಷಗೊಳಿಸಿದರು. ಜನ ಜೀವನದ ನಿಯಾಮಕ ಶಕ್ತಿಯಾಗಿ ರ್ತಿಸುವ ತತ್ವ ಶಾಸ್ತ್ರವೆಂಬ ಇಸ್ಲಾಮಿನ ವೈಶಿಷ್ಟ್ಯವನ್ನು ಕೊನೆಗೊಳಿಸಿ ಸಾಂಪ್ರದಾಯಿಕ ರ್ಮಕ್ಕೆ ಸೀಮಿತಗೊಳಿಸಿದೆಯೆಂದು ಹೆಮ್ಮೆ ಮತ್ತು ಸಂತೋಷ ಪಡುತ್ತಿದ್ದ ವಿರೋಧಿಗಳನ್ನು ಚ್ಚಿಸಿ ಅಸ್ವಸ್ಥಗೊಳಿಸಿ ಇಸ್ಲಾಮೀ ಜೀವನ ವ್ಯವಸ್ಥೆಯ ಪುನಶ್ಚೇತನಕ್ಕೆ ಅವರು ಇಂಧನ ದಗಿಸಿದರು. ಪಾಶ್ಚಾತ್ಯ ಸಂಸ್ಕೃತಿಯ ದೌರ್ಬಲ್ಯಗಳನ್ನು ಅನಾವರಣಗೊಳಿಸಿ ಇಸ್ಲಾಮಿನ ಧ್ಯತೆ ಮತ್ತು ಔಚಿತ್ಯಗಳನ್ನು ಸ್ಪಷ್ಟಪಡಿಸುವ ನಿಟ್ಟಿನಲ್ಲಿ ಮೌದೂದಿಯವರ ವಿಚಾರಗಳೂ ಟುವಟಿಕೆಗಳೂ ಗಣನೀಯ ಪಾತ್ರ ವಹಿಸಿವೆ. ಇಂದು ಅಲ್ಲಲ್ಲಿ ತಲೆಯೆತ್ತಿರುವ ಇಸ್ಲಾಮೀ ಂದನಕ್ಕೆ ಅವರ ಗ್ರಂಥಗಳೇ ಮೂಲ ಒರತೆಯಾಗಿದೆ.

ಖ್ಯಾತ ವಿದ್ವಾಂಸ, ದೂರದರ್ಶಿಯಾದ ಚಿಂತಕ, ಧೀಮಂತ ಸಂಶೋಧಕ, ಅನುಗ್ರಹೀತ ಂಥಕಾರ, ಪತ್ರಕರ್ತ, ಕುರ್‌ಆನ್ ವ್ಯಾಖ್ಯಾನಕಾರ, ಸುಧಾರಕ, ನವೋದಯ ನಾಯಕ ತ್ಯಾದಿ ಪ್ರತಿಭೆಗಳಿಂದ ಸಯ್ಯದ್ ಮೌದೂದಿ ಪ್ರಖ್ಯಾತರಾಗಿದ್ದರು. ಹನ್ನೊಂದನೆಯ ಯಸ್ಸಿನಲ್ಲಿ ಖ್ಯಾತ ಈಜಿಪ್ಟ್ ಬರಹಗಾರ ಕಾಸಿಮ್ ಅಮೀನ್ ಬೇಯವರ 'ಅಲ್ ರ್‌ಅತುಲ್ ಜದೀದ'ವನ್ನು (ಆಧುನಿಕ ಮಹಿಳೆ) ಅರಬಿಯಿಂದ ತರ್ಜುಮೆ ಮಾಡುವ ತ್ತು 17ನೇ ವಯಸ್ಸಿನಲ್ಲಿ 'ತಾಜ್' ವಾರಪತ್ರಿಕೆಯ ಸಂಪಾದಕರಾಗುವಂತಹ ವಿಶೇಷ ತಿಭೆಯಿಂದ ಅವರು ಅನುಗ್ರಹೀತರಾಗಿದ್ದರು.

ಭಾರತದ ಪ್ರಾಚೀನ ಅರಸೊತ್ತಿಗೆಯಾಗಿದ್ದ ಹೈದರಾಬಾದ್‌ಗೆ ಸೇರಿದ ಔರಂಗಾಬಾದ್ ಟ್ಟಣದಲ್ಲಿ ಅಬುಲ್ ಆಲಾ ಮೌದೂದಿ ಕ್ರಿ.ಶ 1903ರ ಸೆಪ್ಟೆಂಬರ್ 25ರಂದು

ಜನಿಸಿದರು. ತಂದೆ ಅಹ್ಮದ್ ಹಸನ್‌ರು ಧರ್ಮಭಕ್ತ ವಿದ್ವಾಂಸರಾಗಿದ್ದರು. ತಾಯಿ ಉರ್ದು ಕವಿ ಮಿರ್ಝಾ ಕುರ್ಬಾನ್ ಅಲಿ ಖಾನ್‌ರ ಪುತ್ರಿ ರುಕಿಯ್ಯ ಬೇಗಮ್ ಆಗಿದ್ದರು.

ಸೈಯದ್ ಮೌದೂದಿಯವರು ತಂದೆಯಿಂದ ಪ್ರಾಥಮಿಕ ಶಿಕ್ಷಣ ಪಡೆದರ ತರುವಾಯ 'ಮದ್ರಸಾ ಫೌಕಾನಿಯ' ಹೈಸ್ಕೂಲ್‌ನಲ್ಲಿ ಪಾಶ್ಚಾತ್ಯ ಶಿಕ್ಷಣವನ್ನೂ ಸಾಂಪ್ರದಾಯಿ ಇಸ್ಲಾಮಿ ಶಿಕ್ಷಣವನ್ನೂ ಪಡೆದರು. ಹನ್ನೊಂದನೇ ವಯಸ್ಸಿನಲ್ಲಿ ಮೌಲವಿ ಪರೀ ಪಾಸಾದರು. ಉನ್ನತ ಅಧ್ಯಯನಕ್ಕಾಗಿ ಹೈದರಾಬಾದ್‌ನ ದಾರುಲ್ ಉಲೂಮ್‌ನ ಸೇರಿದರೂ ತಂದೆಯ ಅನಾರೋಗ್ಯ ಮತ್ತು ಮರಣದಿಂದ ಶಿಕ್ಷಣವನ್ನು ಪೂಣ ಗೊಳಿಸಲಾಗಲಿಲ್ಲ. ತರುವಾಯ ಸ್ವಪ್ರಯತ್ನದಿಂದ ಜ್ಞಾನ ಹೆಚ್ಚಿಸುವತ್ತ ಗಮನ ಹರಿಸಿದರ 1920ರಲ್ಲಿ 17ನೇ ವಯಸ್ಸಿನಲ್ಲಿಯೇ ಮಾತೃ ಭಾಷೆಯಾದ ಉರ್ದುವಿನ ಹೊರ ಇಂಗ್ಲಿಷ್, ಅರಬಿ, ಪರ್ಷಿಯನ್ ಭಾಷೆಗಳಲ್ಲಿ ಚೆನ್ನಾಗಿ ವ್ಯವಹರಿಸುವ ಸಾಮರ್ಥ್ಯ ಗಳಿಸಿದರು.

ಎಳೆ ಪ್ರಾಯದಲ್ಲಿಯೇ ಲೇಖನಗಳನ್ನು ಬರೆಯುತ್ತಿದ್ದ ಅಬುಲ್ ಆ ಮೌದೂದಿಯವರು 15ನೇ ವಯಸ್ಸಿನಲ್ಲಿಯೇ ಪತ್ರಿಕಾ ರಂಗ ಪ್ರವೇಶಿಸಿದರು. 1918ರ ಬಿಜನೂರಿನ 'ಅಲ್ ಮದೀನಾ' ಪತ್ರಿಕೆಯನ್ನು ಸೇರಿದರು. ಎರಡು ವರ್ಷಗಳ ಬಳಿ 1920ರಲ್ಲಿ ಮಧ್ಯ ಪ್ರದೇಶದ ಜಬಲ್ಪುರದಿಂದ ಪ್ರಕಾಶನವಾಗುವ 'ತಾಜ್'ನ ಸಂಪಾದಕರಾ ನೇಮಕಗೊಂಡರು. ಆ ವರ್ಷವೇ ದೆಹಲಿಯಿಂದ ಪ್ರಕಟವಾಗುವ 'ಅಲ್ ಮುಸ್ಲಿಮ್ ಪತ್ರಿಕೆಯ ಸಂಪಾದಕ ಹೊಣೆ ವಹಿಸಿದರು. ಅದು ಜಮ್‌ಇಯ್ಯತುಲ್ ಉಲೆಮಾ ಹಿಂದ್‌ನ ಮುಖವಾಣಿಯಾಗಿತ್ತು. 1923ರ ತನಕ ಆ ಹುದ್ದೆಯಲ್ಲಿ ಮುಂದುವರಿ ಮೌದೂದಿಯವರು ಅನಂತರ ಒಂದೂವರೆ ವರ್ಷ ಔಪಚಾರಿಕ ಶಿಕ್ಷಣದಲ್ಲಿ ಕಳೆದರು 1925ರಲ್ಲಿ ಪುನಃ ದೆಹಲಿಗೆ ಬಂದು 'ಅಲ್ ಜಮ್‌ಇಯ್ಯತ್'ನ ಸಂಪಾದಕರಾಗಿ ಸೇ ಸಲ್ಲಿಸಿದರು. ಆ ಪತ್ರಿಕೆಯೂ ಜಮ್‌ಇಯ್ಯತುಲ್ ಉಲೆಮಾದ ಮುಖವಾಣಿಯಾಗಿತ್ತು 'ಅಲ್ ಜಮ್‌ಇಯ್ಯತ'ನ್ನು ಅಲ್ಪಾವಧಿಯಲ್ಲಿಯೇ ಭಾರತದ ಮುಸ್ಲಿಮರ ಪ್ರಮುಖ ಪತ್ರಿಕೆಯಾಗಿ ಮಾರ್ಪಡಿಸಲು ಮೌದೂದಿಯವರಿಗೆ ಸಾಧ್ಯವಾಯಿತು. 1928ರ ತನಕ ಅವರ ಆ ಹುದ್ದೆಯಲ್ಲಿಯೇ ಸೇವೆ ಸಲ್ಲಿಸಿದರು.

ಅದಕ್ಕಿಂತ ಮೊದಲೇ ಅಬುಲ್ ಆಲಾ ಮೌದೂದಿಯವರು ರಾಜಕೀಯ ಸಮಸ್ಯೆಗಳಲ್ಲಿ ಕೈ ಹಾಕಿ, ರಾಜಕೀಯ ಚಟುವಟಿಕೆಯಲ್ಲಿ ಭಾಗವಹಿಸ ತೊಡಗಿದರು. 1920ರಲ್ಲಿ ಖಿಲಾಫತ ಚಳವಳಿ ಮತ್ತು ಆ ಬಳಿಕ ಅಸಹಕಾರ ಚಳವಳಿಗಳಲ್ಲಿಯೂ ಉತ್ಸಾಹದಿಂದ ಸಹಕರಿಸಿದರು ಅಲ್ಲಾಮ ಮಶ್ರಿಕಿಯವರ ನಾಯಕತ್ವದಲ್ಲಿ ಆರಂಭಗೊಂಡ 'ಖಾಕ್ಸಾರ್' ಎಂಬ ಸ್ವಯ ಸೇವಕ ಸಂಘಟನೆಯ ಸದಸ್ಯರೂ ಆದರು. ಆದರೆ ಅದರ ಪ್ರಯೋಜನದ ಕುರಿತ

ಕೆಯು ಕಡಿಮೆಯಾದ ಕೂಡಲೇ ಅದನ್ನು ತೊರೆದರು. ಖಿಲಾಫತ್ ಚಳವಳಿಯಲ್ಲಿಯೂ ಸಕ್ತಿ ಮೂಡಿತು. ಭಾರತದಲ್ಲಿ ಬ್ರಿಟೀಷ್ ಆಡಳಿತದೊಂದಿಗಿನ ವಿರೋಧದಿಂದ ಘಾನಿಸ್ಥಾನಕ್ಕೆ ಪಲಾಯನ ಮಾಡಬೇಕೆಂದು ವಾದಿಸಿದ 'ತಹ್ರೀಕೆ ಹಿಜ್ರತ್' ನೊಂದಿಗೂ ದೂದಿ ಸಂಬಂಧ ಹೊಂದಿದ್ದರು. ಆದರೆ ಆಂದೋಲನದ ಧ್ಯೇಯ ಧೋರಣೆ ವಸ್ತು ನಾಗಿರಬೇಕೆಂಬ ಅವರ ಒತ್ತಾಯ ತಿರಸ್ಕೃತವಾದುದರಿಂದ ಅದರ ಸಂಬಂಧ ತೊರೆದರು. ತರ ಅಧ್ಯಯನ, ಸಂಶೋಧನೆ ಮತ್ತು ಪತ್ರಿಕಾ ಚಟುವಟಿಕೆಗಳಿಗೆ ಹೆಚ್ಚಿನ ಗಮನ ದರು.

1920-28ರಲ್ಲಿ ಸಯ್ಯದ್ ಮೌದೂದಿಯವರು ನಾಲ್ಕು ಪುಸ್ತಕಗಳನ್ನು ಉರ್ದು ಗೆ ತರ್ಜುಮೆ ಮಾಡಿದರು. ಮೂರು ಇಂಗ್ಲಿಷ್‌ನಿಂದ ಒಂದು ಅರಬಿಯಿಂದ. ಇರಾನಿ ಕ ಸದ್ರುದ್ದೀನ್ ಮುಹಮ್ಮದ್ ಶೀರಾಝಿಯವರ 'ಅಸ್ಫಾರುಲ್ ಅರ್ಬಅ' ಎಂಬ ತತ್ತ್ವ ನ ಗ್ರಂಥವನ್ನು ಅರಬಿಯಿಂದ ಅನುವಾದಿಸಿದರು. 3500 ಪುಟಗಳ ನಾಲ್ಕು ಟಗಳನ್ನು ಕೇವಲ 8 ತಿಂಗಳಲ್ಲಿ ಅವರು ತರ್ಜುಮೆಗೊಳಿಸಿದರು. ಕೇವಲ ಈ ಒಂದು ನೆಯಿಂದ ಅವರ ಅರಬಿ-ಉರ್ದು ಪಾಂಡಿತ್ಯವನ್ನು ತಿಳಿಯಬಹುದಾಗಿದೆ. ಪ್ರಸ್ತುತ ಥವನ್ನು ಉಸ್ಮಾನಿಯಾ ವಾರ್ಸಿಟಿಗಾಗಿ ಭಾಷಾಂತರಿಸಲಾಗಿತ್ತು. 'ಅಸ್ಫಾರುಲ್ ಅರ್ಬಅ' ಥವು ಸಾಮಾನ್ಯ ವಿದ್ವಾಂಸರಿಗೆ ಓದಿ ಗ್ರಹಿಸಲಾಗದಷ್ಟು ಗಹನವಾದ ಕೃತಿಯಾಗಿದೆ.

1928ರಲ್ಲಿ ಮೌಲಾನಾ ಮೌದೂದಿಯವರು 'ಅಲ್ ಜಮ್ ಇಯ್ಯತ್' ಪತ್ರಿಕೆಯನ್ನು ದು ಹೈದರಾಬಾದಿಗೆ ಹೋದರು. ಅಲ್ಲಿ ಅಧ್ಯಯನ-ಸಂಶೋಧನೆ ಮತ್ತು ಬರವಣಿಗೆಯಲ್ಲಿ ರಾದರು. ಮೌಲವಿ ಅಬೂ ಮುಹಮ್ಮದ್ ಮುಸ್ಲಿಹ್ ಪ್ರಕಾಶನ ಗೊಳಿಸುತ್ತಿದ್ದ ರ್ಜುಮಾನುಲ್ ಕುರ್‌ಆನ್' ಮಾಸ ಪತ್ರಿಕೆಯನ್ನು 1933ರಲ್ಲಿ ಅವರು ವಹಿಸಿಕೊಂಡರು. ದೂದಿಯವರ ವಿಚಾರಗಳು ವಿಶೇಷವಾಗಿ ಈ ಪತ್ರಿಕೆಯ ಮೂಲಕ ಪ್ರಚಾರಗೊಂಡಿತು. ಪತ್ರಿಕೆಯ ಸಂಪಾದಕತ್ವದ ಹೊಣೆಯು ಅವರ ಜೀವನದ ಪ್ರಮುಖ ಮೈಲುಗಲ್ಲಾಗಿತ್ತು.

## ಸ್ಲಾಮಿ ಸ್ವರೂಪದ ಸಂರಕ್ಷಣೆ

ಜಮ್‌ಇಯ್ಯತುಲ್ ಉಲೆಮಾ ಏ ಹಿಂದ್ ಕಾಂಗ್ರೆಸ್ ಪರ ವಿದ್ವಾಂಸರ ಟನೆಯಾಗಿತ್ತು. ಆದ್ದರಿಂದ ಜಮ್‌ಇಯ್ಯತ್ ಕಾರ್ಯಕರ್ತರು ದೇಶದ ಸ್ವಾತಂತ್ರ್ಯ ರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಇದು ಅವರ ಇಸ್ಲಾಮಿ ಸ್ವರೂಪ ಮತ್ತು ಸ್ಕೃತಿಕ ವೈಶಿಷ್ಟ್ಯಗಳನ್ನು ಕೆಡಿಸಿತೆಂದು ಮೌಲಾನಾ ಮೌದೂದಿ ಕಳವಳಗೊಂಡರು. ರಿಂದ ಜಮ್‌ಇಯ್ಯತ್‌ನ ಮುಖವಾಣಿಯಾದ 'ಅಲ್ ಜಮ್‌ಇಯ್ಯತ್'ನ ಸಂಪಾದಕೀಯ ನದಲ್ಲಿ ಅವರು ಹೀಗೆ ಬರೆದು; "ಸ್ವಾತಂತ್ರ್ಯದ ಹೆಸರಲ್ಲಿ ಮುಸ್ಲಿಮರಾದ ನಾವು

ನಮ್ಮ ನೈಜ ಸ್ವರೂಪವನ್ನು ತೊರೆದರೆ ಅದು ಗಂಡಾಂತರಕಾರಿ ತಪ್ಪೆಸಗಿದಂತಾದೀ ಜಮ್‌ಇಯ್ಯತುಲ್ ಉಲೆಮಾದ ಅಸ್ತಿತ್ವವೇ ನಮ್ಮ ಸ್ವಾತಂತ್ರ್ಯ ಅಸ್ತಿತ್ವದ ಸ ನಿದರ್ಶನವಾಗಿದೆ. ನಾವು ಮೊದಲನೆಯದಾಗಿಯೂ ಕೊನೆಯದಾಗಿಯೂ ಮುಸ್ಲಿಮ ಆಗಿದ್ದೇವೆ. ಈ ವಾಸ್ತವಿಕತೆಯನ್ನು ಈಗ ನಾವು ಸ್ಪಷ್ಟಪಡಿಸಬೇಕಾಗಿದೆ. ಈ ನಿಲುಮೆಯ ಸಂರಕ್ಷಿಸಿ ಮಾತ್ರ ನಾವು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಬೇಕಾಗಿದೆ."

ಒಂದು ಆದರ್ಶ ಸಮುದಾಯವೆಂಬ ನೆಲೆಯಲ್ಲಿ ಸತ್ಯ ಪ್ರಚಾರವು ಮುಸ್ಲಿಮರ ಕರ್ತವ್ಯವಾಗಿದೆ. ಅದನ್ನು ಸಂಪೂರ್ಣವಾಗಿ ಮರೆತಂತಹ ಸಮುದಾಯವನ್ನು ಮೌಲ ಮೌದೂದಿ ಬಡಿದೆಬ್ಬಿಸಿದರು. ಜನರನ್ನು ಒಳಿತಿನತ್ತ ಆಹ್ವಾನಿಸಿ, ಒಳಿತನ್ನು ಆದೇ ಕೆಡುಕನ್ನು ವಿರೋಧಿಸುವುದೇ ಇಸ್ಲಾಮಿನ ನೈಜ ಸಾರವಾಗಿದೆ. ಇಸ್ಲಾಮ್ ಅಲ್ಲಾ ಸಂದೇಶವಾಗಿದೆ. ಭೂಲೋಕದ ಎಲ್ಲಾ ಮಾನವರೂ ಅದರ ಅಭಿಸಂಬೋಧಿತ ರಾಗಿದ್ದಾ ಅಲ್ಲಾಹನ ಅನುಗ್ರಹವೆಂಬ ಈ ಸಂದೇಶ ದೊರೆತ ಪ್ರತಿಯೋರ್ವ ವ್ಯಕ್ತಿಯೂ ವರ್ಗದ ಇತರರಿಗೆ ಅದನ್ನು ತಲುಪಿಸಬೇಕೆಂದು ಅಲ್ಲಾಹನು ಆಜ್ಞಾಪಿಸಿರುತ್ತಾನೆ. ಆದ್ದರಿ ಧರ್ಮ ಪ್ರಚಾರವು ಇಸ್ಲಾಮಿನ ಆತ್ಮದಲ್ಲಿ ಸೇರಿಕೊಂಡಿದೆ. ಆದರೆ ಇತರರಿಗೆ ಇಸ್ಲಾ ಸಂದೇಶವನ್ನು ತಲುಪಿಸಬೇಕಾದ ಮುಸ್ಲಿಮರು ಆ ಹೊಣೆಯನ್ನು ನಿರ್ವಹಿಸಿಲ್ಲ. ಮಾತ್ರವ ಅವರನ್ನು ಶುದ್ಧಗೊಳಿಸಿ ಹಿಂದೂ ಧರ್ಮಕ್ಕೆ ಮರಳಿಸುವ ಯೋಜಿತ ಪ್ರಯತ್ನಗ ನಡೆದವು. ಆ ಧ್ಯೇಯ ಸಾಧನೆಗಾಗಿ ರಂಗಕ್ಕಿಳಿಯಲು 'ಶುದ್ಧಿ ಚಳವಳಿ'ಗೆ ಸಾಧ್ಯವಾಯಿತೆಂಬ ಪ್ರಶ್ನೆಯು ಮೌದೂದಿಯವರನ್ನು ಚಿಂತೆಗೀಡು ಮಾಡಿತು. ನಾಮ ಮುಸ್ಲಿಮರನ್ನು ನೈಜ ಮುಸ್ಲಿಮರಾಗಿಯೂ ಪರಂಪರಾಗತ ಮುಸ್ಲಿಮ್ ಸಮುದಾಯ ಆದರ್ಶ ಸಮಾಜವಾಗಿಯೂ ಪ್ರಚಾರಕ ತಂಡವಾಗಿಯೂ ಮಾರ್ಪಡಿಸುವುದೇ ಈ ಸಮ ನೈಜ ಪರಿಹಾರವೆಂದೂ ಮೌಲಾನಾ ಮೌದೂದಿ ಗ್ರಹಿಸಿದರು. ಅವರು ಹೀಗೆ ಬರೆ "ಪ್ರತಿಯೊಬ್ಬ ಮುಸ್ಲಿಮನೂ ಮುಸ್ಲಿಮನೆಂಬ ನೆಲೆಯಲ್ಲಿ ಒಂದು ಮಿಶನರಿಯಾಗಿದ ಅವನು ತಾನೂ ಮುಸ್ಲಿಮನಾಗಿರಬೇಕು ಮಾತ್ರವಲ್ಲ, ಮಾತು-ಕೃತಿ, ಗುಣನಡತೆ, ವ್ಯವಹಾರಗ ಇಸ್ಲಾಮಿನ ಸಂದೇಶ ಪ್ರಚಾರ ಮಾಡುವುದೇ ಆತನ ಕಾರ್ಯಭಾರವಾಗಿರಬೇಕು. ಮುಸ್ಲಿಮ ಒಂದು ಮಿಶನರಿ ಸಮುದಾಯದ ಸ್ವಭಾವವಿದ್ದಾಗಲೆಲ್ಲಾ ಅವರು ಖಡ್ಗ ಬಳಸದೆ ಕೇ ಸಂದೇಶ ಪ್ರಚಾರದಿಂದ ರಾಷ್ಟ್ರಗಳನ್ನು ಒಂದೊಂದಾಗಿ ಜಯಿಸಲು ಸಾಧ್ಯವಾಯಿ ಇಂಡೋನೇಶ್ಯಾವು ಸಂಪೂರ್ಣವಾಗಿ ಸಂದೇಶ ಪ್ರಚಾರದಿಂದ ಇಸ್ಲಾಮಿಗೆ ಸೇ ಮಲೇಶ್ಯಾ, ಪೂರ್ವ ಆಫ್ರಿಕಾ, ಪಶ್ಚಿಮ ಆಫ್ರಿಕಾ ಮುಂತಾದ ಅನೇಕ ರಾಷ್ಟ್ರಗಳು ಮುಸ್ಲಿ ತಮ್ಮ ಜೀವನ ವಿಧಾನ ಮತ್ತು ಚಾರಿತ್ರ್ಯದಿಂದ ಜನರ ಮೇಲೆ ಪ್ರಭಾವ ಬೀರಿ ಇಸ್ಲಾ ಆಕರ್ಷಿತವಾದ ಉದಾಹರಣೆಯಾಗಿದೆ. ಭಾರತವನ್ನೇ ತೆಗೆದುಕೊಳ್ಳೋಣ, ಇಲ್ಲಿ ಕೋಟಿಗಟ್ಟಲೆ ಮುಸ್ಲಿಮರು ಹೊರಗಿನಿಂದ ಬಂದವರಲ್ಲ. ಇಲ್ಲಿನ ಮುಸ್ಲಿಮ್ ಸರಕಾರಗಳಾ

ಪರಾಗಲೀ ಒಮ್ಮೆಯೂ ಬಲ ಪ್ರಯೋಗದಿಂದ ಇಸ್ಲಾಮನ್ನು ಪ್ರಚಾರ ಪಡಿಸಿಲ್ಲ. ರೆಲ್ಲರೂ ಧರ್ಮ ಪ್ರಚಾರದಿಂದ ಇಸ್ಲಾಮಿಗೆ ಸೇರಿದವರಾಗಿದ್ದಾರೆ."

ಹೀಗೆ ಮುಸ್ಲಿಮ್ ಸಮುದಾಯದಲ್ಲಿ ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸಲು ಯತ್ನಿಸುವುದರೊಂದಿಗೆ ಅವರ ಆತ್ಮ ಸ್ಥೈರ್ಯವನ್ನು ಗರಿಷ್ಠ ಪ್ರಮಾಣದಲ್ಲಿ ಹೆಚ್ಚಿಸಲು ಯತ್ನಿಸಿದರು. 1926ರಲ್ಲಿ ಅಬ್ದುರ್ರಶೀದ್ ಎಂಬ ಯುವಕನಿಂದ ಸ್ವಾಮಿ ಶ್ರದ್ಧಾನಂದರು ರಾದ ಬಳಿಕ ದೇಶದ್ಯಾದ್ಯಂತ ಮುಸ್ಲಿಮರು ತೀವ್ರ ಟೀಕೆಗೆ ಗುರಿಯಾದರು. ಮುಸ್ಲಿಮರನ್ನು ರಿಗಳೆಂದೂ ಅಸಹಿಷ್ಣುಗಳೆಂದೂ ಸಾರಲಾಯಿತು. ಜತೆಗೆ ಇಸ್ಲಾಮನ್ನು ನಿಂದಿಸಲಾಯಿತು. ಾದ್‌ನ ಕುರಿತು ಉಗ್ರ ಟೀಕೆಗಳು ಕೇಳಿ ಬಂದವು. ಇಸ್ಲಾಮ್ ಖಡ್ಗದಿಂದ ಾರಗೊಂಡಿತೆಂಬ ಆರೋಪವು ಮತ್ತಷ್ಟು ಗಟ್ಟಿಯಾಗಿ ಮೊಳಗಿತು. ಇದು ಮುಸ್ಲಿಮರನ್ನು ವ್ರ ಚಿಂತೆಗೀಡು ಮಾಡಿತು. ಆದ್ದರಿಂದಲೇ ದೆಹಲಿಯ ಜಾಮಿಯ ಮಸೀದಿಯಲ್ಲಿ ಕ್ರವಾರ ದಿನ ಮೌಲಾನಾ ಮುಹಮ್ಮದಲೀಯವರು ಹೃದಯಸ್ಪರ್ಶಿ ಶೈಲಿಯಲ್ಲಿ ಹೀಗೆ ನ್ಗರಿಸ ಬೇಕಾಯಿತು, "ಹಿಂದೂಗಳ ಆರೋಪಗಳಿಗೆ ಉತ್ತರವಾಗಿ ಅಲ್ಲಾಹನ ರಾದರೊಬ್ಬ ದಾಸ ಇಸ್ಲಾಮಿನಲ್ಲಿ ಜಿಹಾದ್‌ನ ವಾಸ್ತವಿಕತೆಯನ್ನು ಜನರ ಸಮಕ್ಷಮ ರ್ಪಿಸುತ್ತಿದ್ದರೆ!!"

ಯುವಕ ಅಬುಲ್ ಆಲಾ ಮೌದೂದಿ ಈ ಕಾರ್ಯಭಾರವನ್ನು ಸ್ವಯಂ ಸಿಕೊಂಡರು. 1928ರಲ್ಲಿ 'ಅಲ್ ಜಿಹಾದ್ ಫಿಲ್ ಇಸ್ಲಾಮ್' ಪ್ರಕಾಶನಗೊಂಡಿತು. ದೂದಿಯವರ ಈ ಗ್ರಂಥವು ಮುಸ್ಲಿಮೇತರರಿಗೆ ಇಸ್ಲಾಮಿನ ಬಗ್ಗೆ ಇರುವ ತಪ್ಪು ವಳಿಕೆಗಳನ್ನು ನೀಗಿಸಲು ಸಹಕಾರಿಯಾಯಿತು ಹಾಗೂ ಮುಸ್ಲಿಮರ ಆತ್ಮ ವಿಶ್ವಾಸ ಸ್ತು ಧೈರ್ಯವೂ ಹೆಚ್ಚಿತು.

## ಶ್ಚಾತ್ಯೀಕರಣದ ವಿರುದ್ಧ

ಭಾರತೀಯ ಮುಸ್ಲಿಮರನ್ನು ಪಾಶ್ಚಾತ್ಯ ವಿಚಾರಧಾರೆ ಮತ್ತು ಲೌಕಿಕ ಸಿದ್ಧಾಂತಗಳಿಂದ ಕ್ತಗೊಳಿಸಲು ಸೈಯದ್ ಅಬುಲ್ ಆಲಾ ಸಾಕಷ್ಟು ಪ್ರಯತ್ನಿಸಿದರು. ಇಸ್ಲಾಮಿ ಉಡುಗೆ ಡುಗೆಗಳನ್ನು ತೊರೆದು ಪಾಶ್ಚಾತ್ಯ ಮಾದರಿಯನ್ನು ಅನುಕರಿಸಿದ ಮುಸ್ಲಿಮರನ್ನು ಜ್ಞಾವಂತರಾಗಿ ಮಾಡಲಿಕ್ಕಾಗಿ ಅವರು 'ಲಿಬಾಸ್‌ಕಾ ಮಸ್‌ಅಲಃ' ಎಂಬ ಲೇಖನವನ್ನು ದರು. ವಸ್ತ್ರವು ಕೇವಲ ಬಾಹ್ಯ ಆವರಣವಲ್ಲ. ಅದು ಧಾರ್ಮಿಕ, ಸಾಂಸ್ಕೃತಿಕ ಹೋವೈಜ್ಞಾನಿಕವಾದ ಹಲವು ಅಂಶಗಳನ್ನು ಒಳಗೊಂಡಿದೆಯೆಂದು ಅವರು ಸಮರ್ಥಿಸಿದರು.

ಸೈಯದ್ ಮೌದೂದಿಯವರು ಸಮಕಾಲೀನ ಬೇಡಿಕೆಯೇನೆಂಬುದನ್ನು ಗುರುತಿಸಿದ್ದರು. ನ್ನು ಅವರು ಹೀಗೆ ವಿವರಿಸಿದ್ದರು; "ಮೊದಲನೆಯದಾಗಿ ಮುಸ್ಲಿಮ್ ಬುದ್ಧಿಜೀವಿಗಳಲ್ಲಿ

ಪ್ರಭಾವ ಬೀರಿದ ಪಾಶ್ಚಾತ್ಯ ಸಂಸ್ಕೃತಿ ಮತ್ತು ವಿಚಾರಧಾರೆಯ ಅಲೆಯಬ್ಬರ
ತಡೆಯಬೇಕು. ಇಸ್ಲಾಮಿಗೆ ಸ್ವಂತ ಜೀವನ ಪದ್ಧತಿ ಮತ್ತು ಸಂಸ್ಕೃತಿಯಿದೆ. ಅವು
ರೀತಿಯಲ್ಲಿಯೂ ಪಾಶ್ಚಾತ್ಯ ಸಂಸ್ಕೃತಿ ಮತ್ತು ವಿಚಾರಧಾರೆಗಳಿಗಿಂತ ಉತ್ಕೃಷ್ಟವಾಗಿದೆಯೆ
ಅವರಿಗೆ ಮನಗಾಣಿಸಬೇಕು. ನಾಗರಿಕ ಮತ್ತು ಸಾಂಸ್ಕೃತಿಕ ವಿಷಯದಲ್ಲಿ ಪರರ
ಭಿಕ್ಷೆ ಬೇಡಬೇಕೆಂಬ ವಿಚಾರವನ್ನು ಅವರ ಮನಸ್ಸಿನಿಂದ ನೀಗಿಸಬೇಕು. ಜಗತ್ತಿನ ಇತ
ವ್ಯವಸ್ಥೆಗಳಿಗಿಂತ ಉತ್ತಮವಾದ ಒಂದು ಸಂಪೂರ್ಣ ಪದ್ಧತಿ ತಮ್ಮ ಬಳಿಯಲ್ಲಿದೆಯೆ
ಅವರಿಗೆ ನೆನಪಿಸಬೇಕು. ಅವರು ಹೇಡಿಗಳಾಗಿ ಅನುಕರಿಸುತ್ತಿರುವ ಪಾಶ್ಚಾತ್ಯ ಪದ್ಧ
ನಾನಾ ರೀತಿಯ ದೌರ್ಬಲ್ಯಗಳನ್ನು ಸ್ಪಷ್ಟವಾಗಿ ಅವರಿಗೆ ಮನಗಾಣಿಸಬೇಕು."

ಸೈಯದ್ ಅಬುಲ್ ಆಲಾ ಮೌದೂದಿಯವರು ಈ ಹೊಣೆಯನ್ನು ಸ್ವ
ವಹಿಸಿಕೊಂಡರು. ತಮ್ಮ ಸಕಲ ಸಾಮರ್ಥ್ಯಗಳನ್ನು ಅದಕ್ಕಾಗಿ ವಿನಿಯೋಗಿಸಿದರು.
ರಂಗದಲ್ಲಿ ಅವರು ಅದ್ಭುತ ಮತ್ತು ಆಶಾದಾಯಕವಾದ ವಿಜಯ ಸಾಧಿಸಿದರು.
ಯುಗಪುರುಷರ ಶ್ರೇಷ್ಠ ಕೃತಿಗಳು ಮತ್ತು ಯೋಜಿತ ಪ್ರಯತ್ನಗಳು ಲಕ್ಷಗಟ್ಟಲೆ ಯುವಕ
ಪಾಶ್ಚಾತ್ಯರ ಅಂಧಾನುಕರಣೆಯಿಂದ ವಿಮೋಚನೆಗೊಳಿಸಿ ಇಸ್ಲಾಮಿನ ವಕ್ತಾರರಾಗಿ ಮಾರ್ಪಡಿ
ಹೀಗೆ ಪಾಶ್ಚಾತ್ಯ ಪ್ರಚಾರಗಳಿಂದ ಗಲಿಬಿಲಿಗೊಂಡ ಸಮುದಾಯಕ್ಕೆ ಸ್ಫೂರ್ತಿ ಮತ್ತು ಧೈ
ನೀಡಿ ಪ್ರಬಲಗೊಳಿಸುವ ನಿಟ್ಟಿನಲ್ಲಿ ಸಯ್ಯದ್ ಮೌದೂದಿಯವರು ಅದ್ಭುತ ಯ
ಗಳಿಸಿದ್ದಾರೆ.



# IV

# ಸಂಘಟನೆಯ ಅಗತ್ಯ ಮತ್ತು ಮಹತ್ವ

**ಸಂ**ಘ ಜೀವಿಯಾದ ಮಾನವನಲ್ಲಿ ಸಂಘ ಪ್ರಜ್ಞೆ ಸ್ವಾಭಾವಿಕವಾಗಿದೆ. ಇಸ್ಲಾಮ್ ೯ದತ್ತವಾಗಿ ಅದರ ಅನುಯಾಯಿಗಳಿಗೆ ಸಂಘಟಿತ ಜೀವನವನ್ನು ಕಡ್ಡಾಯಗೊಳಿಸಿದೆ. ್ಲಿಮರು ಒಂದು ಸಮಾಜವಾಗಿ ಜೀವಿಸಬೇಕೆಂದು ಇಸ್ಲಾಮ್ ವಿಧಿಸಿದೆ. ಯಾರಿಗೂ ಿದಿಂದ ದೂರವಿರುವ ಅನುಮತಿ ಇಲ್ಲ. ಸಂಘಟನೆ (ಅಲ್ ಜಮಾಅತ್)ಯಿಂದ ರವಿರುವುದು ಇಸ್ಲಾಮಿನಿಂದ ಹೊರ ಹೋದಂತೆ ಎಂದು ಪ್ರವಾದಿವರ್ಯರು(ಸ) ದ್ದಾರೆ. ಪ್ರವಾದಿ(ಸ) ಹೀಗೆ ಹೇಳಿದ್ದಾರೆ; "ನಾನು ನಿಮಗೆ 5 ವಿಷಯಗಳನ್ನು ಾಪಿಸುತ್ತೇನೆ. ಅಲ್ಲಾಹನು ಅವುಗಳನ್ನು ನನಗೆ ಆಜ್ಞಾಪಿಸಿರುತ್ತಾನೆ. ನೀವು ಸಂಘಟಿತರಾಗಿರಿ, ಕನ ನಿರ್ದೇಶಗಳನ್ನು ಆಲಿಸಿರಿ, ಅನುಸರಿಸಿರಿ, (ಅಗತ್ಯ ಬಿದ್ದರೆ) ಅಲ್ಲಾಹನಿಗಾಗಿ ಶ ತೊರೆಯಿರಿ. ಆತನ ಮಾರ್ಗದಲ್ಲಿ ಹೋರಾಡಿರಿ, ಯಾರಾದರೂ ಸಂಘಟನೆಯಿಂದ ು ಗೇಣು ದೂರ ಸರಿದರೆ - ಸಂಘಟನೆಗೆ ಮರಳದಿದ್ದರೆ - ಇಸ್ಲಾಮಿನ ಸಂಬಂಧವನ್ನು ಕೊರಳಿನಿಂದ ಆತ ಕಡಿದೆಸೆದನು. ಜಾಹಿಲಿಯ್ಯತ್‌ನತ್ತ (ಒಡಕು ಮತ್ತು ಅನೈಕ್ಯ) ುವಾತನು ನರಕಕ್ಕೆ ಅರ್ಹನಾಗಿದ್ದಾನೆ." ಆಗ ಸಹಾಬಿಗಳು ಕೇಳಿದರು; "ಆತ ನಮಾಝ್ ್ತು ಉಪವಾಸಗಳನ್ನು ಪಾಲಿಸಿದರೆ", ಪ್ರವಾದಿ(ಸ) ಹೀಗೆ ಉತ್ತರಿಸಿದರು; "ಆತ ಝ್, ಉಪವಾಸಗಳನ್ನು ಪಾಲಿಸುತ್ತಾ ನಾನು ಮುಸ್ಲಿಮನೆಂದು ವಾದಿಸಿದರೂ ಸರಿಯೇ."

(ಅಹ್ಮದ್, ಹಾಕಿಮ್)

ಪ್ರವಾದಿ(ಸ) ಹೀಗೆ ಉಪದೇಶಿಸಿದ್ದಾರೆ; "ಸಂಘಟನೆಯನ್ನು ಬಿಗಿ ಹಿಡಿಯಿರಿ. ್ಯವನ್ನು ತೊರೆಯಿರಿ." (ತಿರ್ಮಿದಿ). "ಯಾವನಾದರೂ ನಾಯಕನ ಅನುಸರಣೆಯನ್ನು ಸಂಘಟನೆಯಿಂದ ದೂರವಾಗಿ ನಿಧನವಾದರೆ, ಆತನ ಮರಣವು ಅನಿಸ್ಲಾಮಿಕ ವಾಗುವುದು."

(ಮುಸ್ಲಿಮ್)

ಪ್ರವಾದಿಯವರು(ಸ) ಒತ್ತಿ ಹೇಳಿದ ಹಾಗೂ ಎಲ್ಲ ಮುಸ್ಲಿಮರೂ ಕಡ್ಡಾಯವಾಗಿ ರಬೇಕಾದ ಮತ್ತು ಅದರಿಂದ ಹೊರಗುಳಿದರೆ ಇಸ್ಲಾಮಿನಿಂದಲೇ ಹೊರ ಹೋದಂತಾಗುವ ಟನೆಯೇ ಅಲ್ ಜಮಾಅತ್. ಇಸ್ಲಾಮಿನ ಆಗಮನದಿಂದ ಅದು ಆರಂಭಗೊಂಡಿದೆ. ದಿವರ್ಯರ(ಸ) ನೇಮಕದಿಂದ ನಿಧನದ ತನಕ ಅವರೇ ಈ ಸಮಾಜದ ನೇತೃತ್ವ ದ್ದರು. ಪ್ರವಾದಿಯ(ಸ) ಬಳಿಕ ನಾಲ್ವರು ಖಲೀಫರು. ತರುವಾಯ ಇಸ್ಲಾಮೀ ರಾಷ್ಟ್ರಕ್ಕೆ ಕತ್ವ ನೀಡಿದ ಮುಸ್ಲಿಮ್ ಆಡಳಿತಗಾರರು.

ಇಸ್ಲಾಮೀ ಸಮಾಜವು ಯಾವಾಗಲೂ ಸಂಘಟಿತವಾಗಿತ್ತು. ಪ್ರವಾದಿ ನೂಹ ವಿಶ್ವಾಸವಿರಿಸಿದವರು ಅವರ ನಾಯಕತ್ವದಲ್ಲಿ ಸಂಘಟಿಸಿದರು. ಅನಂತರದ ಪ್ರವಾ ಅನುಯಾಯಿಗಳೆಲ್ಲರೂ ತಂತಮ್ಮ ನಾಯಕರ ಹಿಂದೆ ಸಂಘಟಿತರಾದರು. ಅಸಂಘಟಿತ ಇಸ್ಲಾಮಿಗೆ ಸಂಪೂರ್ಣ ಅನ್ಯವಾಗಿದೆ. ಮುಸ್ಲಿಮರಿಗೆ ಅಪರಿಚಿತವಾಗಿದೆ. ಅವರು ಎಷ್ಟೇ ವಿಭಾಗವಾಗಿದ್ದರೂ ಸರಿಯೇ. ಪ್ರವಾದಿ(ಸ) ಹೀಗೆಂದಿದ್ದಾರೆ; "ಒಂದು ನಿರ್ಜನ ಪ್ರದೇಶ ಮೂವರಿದ್ದರೆ ಅವರ ಪೈಕಿ ಒಬ್ಬರನ್ನು ನಾಯಕರಾಗಿ ಮಾಡದಿರಬಾರದು."

(ಬುಖಾರಿ, ಮುಸ್ಲಿ

"ಮೂವರು ಪ್ರಯಾಣ ಹೊರಟರೆ ಅವರಲ್ಲೋರ್ವರನ್ನು ನಾಯಕನನ್ನಾಗಿ ಮಾ

(ಅಬೂ ದಾವ

ಈ ಹದೀಸ್‌ಗಳ ವ್ಯಾಖ್ಯಾನದಲ್ಲಿ ಅಲ್ಲಾಮಾ ಶೌಕಾನಿ ಹೀಗೆ ಬರೆದಿ "ಮೂವರು ಅಥವಾ ಅದಕ್ಕಿಂತ ಹೆಚ್ಚು ಮಂದಿಯಿದ್ದರೆ ಓರ್ವರನ್ನು ಅಮೀರ್ ನೇಮಿಸಬೇಕೆಂದು ಇದರಿಂದ ವ್ಯಕ್ತವಾಗುತ್ತದೆ. ಯಾಕೆಂದರೆ ಹಾಗೆ ಮಾಡುವುದರಿಂ ಅವರು ಅನೈಕ್ಯದಿಂದ ಸುರಕ್ಷಿತರಾಗುತ್ತಾರೆ. ನಿರ್ಜನ ಸ್ಥಳದಲ್ಲಿ ಅಥವಾ ಯಾತ್ರೆಯಲ್ಲಿ ಮೂವರ ಕುರಿತು ಶರೀಅತ್ ಹೀಗೆ ವಿಧಿಸಿರುವಾಗ ಹಳ್ಳಿ ಪಟ್ಟಣಗಳಲ್ಲಿ ವಾಸವಾಗಿರುವ ಪರಸ್ಪರ ಅತಿಕ್ರಮಣ ಮತ್ತು ಕಲಹಗಳಿಗೆ ಪರಿಹಾರ ತೀರ್ಮಾನದ ಅಗತ್ಯವಿರುವ ಜ ಸಮೂಹಕ್ಕೂ ಈ ಕಾನೂನು ಅನ್ವಯವಾಗುತ್ತದೆ."

(ನೈಲುಲ್ ಔತಾರ್ : ಕಿತಾಬುಲ್-ಅಖ್ಲಿಯತಿ ವಲ್ ಅಹ್‌ಕ

## ಸಂಘಟನಾ ವ್ಯವಸ್ಥೆಯ ಪತನ

1924ರಲ್ಲಿ ಉಸ್ಮಾನಿಯಾ ಖಿಲಾಫತ್‌ನ ಪತನದಿಂದ ಜಾಗತಿಕ ಮುಸ್ಲಿಮರನ್ನು ಸೇರಿಸಿದ್ದ ನಾಮ ಮಾತ್ರ ಪಾಶವೂ ತುಂಡಾಯಿತು. ಅದರಿಂದಾಗಿ ಏಕ ಸಂಘಟನೆ ( ಜಮಾಅತ್) ಎಂಬ ಸ್ಥಿತಿಯೂ ಸಂಪೂರ್ಣ ಮಾಯವಾಯಿತು. ಎಲ್ಲ ಮುಸ್ಲಿಮರನ್ನು ಒ ಗೂಡಿಸುವ ಜಾಗತಿಕ ನಾಯಕತ್ವ ಅಳಿಯಿತು. ಅದು, ಇಸ್ಲಾಮೀ ಜಗತ್ತಿನ ಅತೀ ದ ಸಂಕಟವಾಗಿತ್ತು. ಒಂದೇ ಸಂಘವೆಂಬ ಸ್ಥಿತಿಯ ಶಿಥಿಲತೆಯು ಹಲವು ಹೊಸ ಸಮಸ್ಯೆ ಹೇತುವಾಯಿತು. ಅಷ್ಟೊಂದು ಗಂಭೀರ ಮತ್ತು ದೂರ ವ್ಯಾಪಕ ಪರಿಣಾಮ ಬಿ ಬೇರೊಂದು ಸಮಸ್ಯೆಯನ್ನು ಮುಸ್ಲಿಮ್ ಲೋಕವು ಆ ತನಕ ಅನುಭವಿಸಿರಲಿಲ್ಲ.

ಇಸ್ಲಾಮಿನ ಸಂಘಟನಾ ವ್ಯವಸ್ಥೆಯು ಅಡಿಮೇಲಾದ ಈ ಪರಿಸ್ಥಿತಿಯಲ್ಲಿ ಪುನರುತ್ಥಾನವು ಮುಸ್ಲಿಮರ ಪ್ರಥಮ ಹೊಣೆಯಾಯಿತು. ಹಿಂದಿನ ಕಾಲದಲ್ಲಿ ಸಾಮ

ಸ್ಥೆಯನ್ನು ಮೈಗೂಡಿಸಿ ಸುಭದ್ರಗೊಳಿಸುವುದು ಸಮುದಾಯದ ಹೊಣೆಗಾರಿಕೆಯಾಗಿತ್ತು. ರೆ ಅಲ್ ಜಮಾಅತ್ ಮತ್ತು ಏಕ ನಾಯಕತ್ವದ ಪತನದಿಂದಾಗಿ ಸಂಘಟಿತ ಸ್ಥಿತಿಯ ವಹಾರಿಕ ಪುನಸ್ಥಾಪನೆಯು ಪ್ರಮುಖ ಹೊಣೆಯಾಯಿತು.

ಇಂದಿನ ಜಾಗತಿಕ ವ್ಯವಸ್ಥೆಯು ದೇಶ-ರಾಷ್ಟ್ರಗಳ ಗಡಿಗಳನ್ನು ಹೊಂದಿದೆ. ಅದು ಸುವ ವ್ಯಾವಹಾರಿಕ ಸಮಸ್ಯೆಗಳನ್ನು ನಿರ್ಲಕ್ಷಿಸಲು ಯಾರಿಗೂ ಸಾಧ್ಯವಿಲ್ಲ. ಆದ್ದರಿಂದಲೇ ಮಿಮಿ ಸಮಾಜ ಮತ್ತು ಸಂಘಟನೆಗಳಿಗೂ ರಾಷ್ಟ್ರೀಯ ವೈಶಿಷ್ಟ್ಯ ಮತ್ತು ರಾಷ್ಟ್ರ ಗಳನ್ನೂ ಪರಿಗಣಿಸಬೇಕಾಗುತ್ತದೆ. ಒಂದೇ ಬಾರಿ ಇಸ್ಲಾಮ್ ಆದೇಶಿಸುವ ಏಕಲೋಕ ಸ್ಥೆಯನ್ನು ಸ್ಥಾಪಿಸಲು ಸಾಧ್ಯವಿಲ್ಲ. ಜಾಗತಿಕ ಮುಸ್ಲಿಮರಿಗೆ ಏಕೈಕ ನಾಯಕತ್ವ ಮತ್ತು ತೇ ಸಂಘಟನೆಯಿರಬೇಕೆಂಬುದು ಇಸ್ಲಾಮಿನ ಬೇಡಿಕೆಯಾಗಿದೆ. ದೇಶ-ರಾಷ್ಟ್ರಗಳ ಮಿತಿಯಿಂದಾಗಿ ಅದನ್ನು ಒಮ್ಮೆಲೆ ವ್ಯಾವಹಾರಿಕ ಗೊಳಿಸಲು ಸಾಧ್ಯವಿಲ್ಲ. ಸಾಮ್ರಾಜ್ಯ ತ್ವದ ಅತಿಕ್ರಮಣದಿಂದಾಗಿ ಶಿಥಿಲತೆ ಮತ್ತು ಸಂಘಟನಾ ವ್ಯವಸ್ಥೆಯ ಪತನವು ಅದಕ್ಕೆ ಯಾಗುತ್ತದೆ. ರಾಷ್ಟ್ರಗಳೊಳಗೆ ಇಸ್ಲಾಮಿ ಸಂಘಟನೆಗಳನ್ನು ರಚಿಸಿ ಕೆಲಸ ಮಾಡುವುದೇ ಕ್ಕೆ ಪರಿಹಾರವಾಗಿದೆ. ಅವು ಸಂಪೂರ್ಣ ಬೆಳೆದು ಗುರಿ ಸಾಧಿಸುವುದರಿಂದ ಸಹಜವಾಗಿ ' ಜಮಾಅತ್ ರೂಪು ತಾಳುತ್ತದೆ. ಆ ಕುರಿತು ಸಯ್ಯದ್ ಅಬುಲ್ ಆಲಾ ಮೌದೂದಿ ಬರೆದಿದ್ದಾರೆ; "ಇಸ್ಲಾಮಿನ ಸಾಮಾಜಿಕ ವ್ಯವಸ್ಥೆಯು ಅಸ್ತವ್ಯಸ್ತವಾಗಿ, ಆ ವ್ಯವಸ್ಥೆಯ ಯ ಬದಲಾಗಿ ಅದರ ಪುನಃಸ್ಥಾಪನೆಯ ಸಮಸ್ಯೆ ಎದ್ದಾಗ ಇಡೀ ಮುಸ್ಲಿಮ್ ದಾಯ ಒಳಗೊಂಡ 'ಅಲ್ ಜಮಾಅತ್' ಆರಂಭದಲ್ಲಿಯೇ ರೂಪುಗೊಳ್ಳಲು ಖಂಡಿತ ವಿಲ್ಲ. ಮೊತ್ತ ಮೊದಲು ಪ್ರತಿಯೊಂದು ಪ್ರದೇಶದಲ್ಲಿಯೂ ಆ ಉದ್ದೇಶಾರ್ಥ ಒಂದು ಸಂಘಟನೆ ಸ್ಥಾಪನೆಗೊಂಡು ಸ್ವಂತ ನೆಲೆಯಲ್ಲಿ ಕಾರ್ಯಾಚರಿಸದೆ ಗತ್ಯಂತರವಿಲ್ಲ. ಗೆ ಈ ಎಲ್ಲ ಸಂಘಟನೆಗಳೂ ಒಂದುಗೂಡುವುವು. ಸ್ವಾರ್ಥ, ಉಗ್ರವಾದ, ಲೌಕಿಕ ಸಕ್ತಿ ಇತ್ಯಾದಿ ಮಾಲಿನ್ಯಗಳಿಂದ ಮುಕ್ತವಾಗಿ ನಿಷ್ಕಳಂಕ ಮತ್ತು ಸ್ವಾರ್ಥ ರಹಿತವಾಗಿ ಇಸ್ಲಾಮಿ ಧ್ಯೇಯ ಸಾಧನೆಗಾಗಿ ಇಸ್ಲಾಮಿ ಮಾರ್ಗದಿಂದ ಕಾರ್ಯಾಚರಿಸಿದರೆ ಸತ್ಯ ರ್ಗದಲ್ಲಿ ಕೆಲಸ ಮಾಡುವವರಿಗೆ ಹೆಚ್ಚು ಕಾಲ ಬೇರೆಯಾಗಿರಲು ಸಾಧ್ಯವಿಲ್ಲ. ಸತ್ಯವು ಲ್ಲದಿದ್ದರೆ ನಾಳೆ ಅವರನ್ನು ಒಂದುಗೂಡಿಸುವುದು. ಯಾಕೆಂದರೆ, ಸತ್ಯದ ಸ್ವಭಾವವೇ ಟನೆ, ಸಾಮರಸ್ಯ, ಹೊಂದಾಣಿಕೆ, ಐಕ್ಯ ಇತ್ಯಾದಿಗಳನ್ನು ಅಪೇಕ್ಷಿಸುತ್ತದೆ."

(ಸತ್ಯದ ಸಾಕ್ಷ್ಯ, ಪುಟ : 26,27)

## ಘಟನೆ ಮತ್ತು ಹೊಣೆ ನಿರ್ವಹಣೆ

ಮುಸ್ಲಿಮರು ಕೇವಲ ಒಂದು ಜನಾಂಗ ಅಥವಾ ಜಾತಿಯಲ್ಲ. ಒಂದು ಆದರ್ಶ ದಾಯ ಮತ್ತು ಧರ್ಮ ಪ್ರಚಾರಕ ತಂಡವಾಗಿದ್ದಾರೆ. ಅವರು ಒಳಿತನ್ನು ಉಳಿಸಿ

ಕೆಡುಕನ್ನು ಅಳಿಸಲಿಕ್ಕಾಗಿ ನೇಮಕಗೊಂಡವರು. ಮಾನವಕುಲದ ಮಾರ್ಗದರ್ಶನದ ಹೊಣೆಯ ಅವರಿಗೆ ನೀಡಲಾಗಿದೆ. ಅಲ್ಲಾಹ್ ಹೀಗೆ ತಿಳಿಸಿರುತ್ತಾನೆ; "ನೀವು ಮಾನವರ ಮಾರ್ಗದರ್ಶ ಮತ್ತು ಸುಧಾರಣೆಗಾಗಿ ನೇಮಿಸಲ್ಪಟ್ಟ ಉತ್ತಮ ಸಮುದಾಯವಾಗಿರುವಿರಿ. ನೀವು ಒಳಿತ ಆಜ್ಞಾಪಿಸುತ್ತೀರಿ. ಕೆಡುಕನ್ನು ವಿರೋಧಿಸುತ್ತೀರಿ. ಅಲ್ಲಾಹನಲ್ಲಿ ವಿಶ್ವಾಸವಿರಿಸುತ್ತೀರಿ."

(ಪವಿತ್ರ ಕುರ್‌ಆನ್,3: 1

"ನೀವು ಜನರನ್ನು ಸತ್ಯದತ್ತ ಆಹ್ವಾನಿಸುವ ಒಳಿತನ್ನು ಆದೇಶಿಸುವ ಕೆಡುಕ ತಡೆಯುವ ಒಂದು ಸಮುದಾಯವಾಗಿ ಮಾರ್ಪಡಬೇಕು. ಈ ಕಾರ್ಯಭಾರವನ್ನು ನಿರ್ವಹಿಸುವ ವಿಜಯಶಾಲಿಗಳು." (ಪವಿತ್ರ ಕುರ್‌ಆನ್,3: 1

"ನಿಮ್ಮನ್ನು ನಾವೊಂದು ಮಧ್ಯಮ ಸಮುದಾಯವಾಗಿ ಮಾಡಿದ್ದೇವೆ. ನಿ ಲೋಕದ ಜನರಿಗೆ ಸಾಕ್ಷಿಯಾಗಲಿಕ್ಕಾಗಿ ಮತ್ತು ಪ್ರವಾದಿ(ಸ) ನಿಮಗೆ ಸಾಕ್ಷಿಯಾಗಲಿಕ್ಕಾ

(ಪವಿತ್ರ ಕುರ್‌ಆನ್,2: 1

"ಅಲ್ಲಾಹನ ಮಾರ್ಗದಲ್ಲಿ ಸೂಕ್ತ ರೀತಿಯಲ್ಲಿ ಹೋರಾಡಿರಿ. ಆತನು ಕಾರ್ಯಭಾರಕ್ಕಾಗಿ ನಿಮ್ಮನ್ನು ಆಯ್ಕೆ ಮಾಡಿದ್ದಾನೆ. ಆತನು ಧರ್ಮದಲ್ಲಿ ನಿಮಗೆ ಯಾವ ಕ್ಲಿಷ್ಟತೆಯನ್ನೂ ಇರಿಸಿಲ್ಲ." (ಪವಿತ್ರ ಕುರ್‌ಆನ್,22:

ಸತ್ಯ ಪ್ರಚಾರ, ಒಳಿತಿನ ಆದೇಶ, ಕೆಡುಕಿನ ವಿರೋಧ, ಸತ್ಯದ ಸಾಕ್ಷ್ಯ ಇತ ಚಟುವಟಿಕೆಗಳಿಂದ ಧರ್ಮದ ಸಂಸ್ಥಾಪನೆಗಾಗಿ ಪ್ರಯತ್ನಿಸಬೇಕಾದುದು ಎಲ್ಲಾ ವಿಶ್ವಾಸಿ ಹೊಣೆಯಾಗಿದೆ. ಗತ ಪ್ರವಾದಿಗಳನ್ನೂ ಅಂತ್ಯ ಪ್ರವಾದಿ ಮುಹಮ್ಮದ್‌ರನ್ನೂ(ಸ) ಅದಕ್ಕಾಗಿ ನೇಮಿಸಲಾಗಿತ್ತು. ಅಲ್ಲಾಹನು ಹೇಳುತ್ತಾನೆ.

"ಅವನು ನೂಹರಿಗೆ ಆಜ್ಞಾಪಿಸಿದ್ದ ಧರ್ಮ ವಿಧಾನವನ್ನೇ ನಿಮಗಾಗಿಯೂ ನಿಶ್ಚಂ ಕೊಟ್ಟಿದ್ದಾನೆ ಮತ್ತು (ಮುಹಮ್ಮದರೇ) ಈಗ ನಾವು ಅದನ್ನೇ ದಿವ್ಯವಾಣಿಯ ಮೂ ನಿಮ್ಮ ಕಡೆಗೆ ಕಳುಹಿಸಿರುತ್ತೇವೆ. ಇದನ್ನೇ ನಾವು ಇಬ್ರಾಹೀಮ್, ಮೂಸಾ ಮ ಈಸಾರಿಗೂ ಬೋಧಿಸಿದ್ದೆವು. ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಇದರಲ್ಲಿ ಭಿನ್ನರಾಗ ಎಂಬ ಆದೇಶದೊಂದಿಗೆ." (ಪವಿತ್ರ ಕುರ್‌ಆನ್,42:

ಪ್ರಸ್ತುತ ಧ್ಯೇಯ ಮತ್ತು ಬೇಡಿಕೆಗಾಗಿ ಮುಸ್ಲಿಮರು ಸಂಘಟಿಸಿ ಒಗ್ಗಟ್ಟಾಗಬೇ ಅಲ್ಲಾಹ್ ಆಜ್ಞಾಪಿಸಿರುತ್ತಾನೆ; "ನೀವು ಒಗ್ಗಟ್ಟಿನಿಂದ ಅಲ್ಲಾಹನ ಪಾಶವನ್ನು ಬಿಗಿ ಹಿಡಿ ನೀವು ಭಿನ್ನರಾಗ ಬೇಡಿರಿ." (ಪವಿತ್ರ ಕುರ್‌ಆನ್,3:

"ಅಲ್ಲಾಹ್ ಮತ್ತು ಆತನ ರಸೂಲರನ್ನು ಅನುಸರಿಸಿರಿ. ಪರಸ್ಪರ ಜಗಳವಾಡಬೇ

ನ್ಯಥಾ ನಿಮ್ಮಲ್ಲಿ ದೌರ್ಬಲ್ಯ ಉಂಟಾಗುವುದು ಮತ್ತು ನೀವು ಹೇಡಿಗಳಾಗಿ ಬಿಡುವಿರಿ. ಹನೆಯಿಂದ ವರ್ತಿಸಿರಿ. ಅಲ್ಲಾಹ್ ಸಹನ ಶೀಲರೊಂದಿಗೆ ಇದ್ದಾನೆ."

(ಪವಿತ್ರ ಕುರ್‌ಆನ್,8: 46)

ಧರ್ಮದ ಸಂಸ್ಥಾಪನೆಗೆ (ಇಕಾಮತುದ್ದೀನ್) ಭಾರೀ ಯೋಜನೆ, ಪದ್ಧತಿ, ಕಾರ್ಯಕ್ರಮ ನಿವಾರ್ಯವಾಗಿದೆ. ಇಸ್ಲಾಮೀ ಪ್ರಚಾರ, ಮುಸ್ಲಿಮ್ ಸಮುದಾಯದ ಸುಧಾರಣೆ, ಇಸ್ಲಾಮ್ ರೋಧಿ ವಿಮರ್ಶೆ ಮತ್ತು ಕಾಲದ ಸವಾಲುಗಳನ್ನು ಎದುರಿಸುವುದು ಇತ್ಯಾದಿಗಳನ್ನು ಕ್ತಿಗಳಿಗೆ ಒಬ್ಬೊಬ್ಬರಾಗಿ ನಿರ್ವಹಿಸಲು ಸಾಧ್ಯವಿಲ್ಲ. ಅದಕ್ಕೆ ಸಂಘಟಿತ ಪ್ರಯತ್ನದ ಗತ್ಯವಿದೆ. ಪತ್ರಿಕೆ, ನಿಯತಕಾಲಿಕ, ಪುಸ್ತಕಗಳ ಪ್ರಕಾಶನ ಪ್ರಚಾರದಂತಹ ಸಾಮಾನ್ಯ ಂಸಗಳಿಗೂ ಸಂಘಟಿತ ಶ್ರಮ ಬೇಕೇ ಬೇಕು. ವಸ್ತುಶಃ ಸಂಘಟನೆಯ ಅಗತ್ಯವಿಲ್ಲವೆಂಬ ಚಿತ್ರವಾದದ ಪ್ರಚಾರಕ್ಕೂ ಸಂಘಟನೆ ಮತ್ತು ನಾಯಕತ್ವದ ಅಗತ್ಯವಿದೆ.

ಒಂದು ರಾಷ್ಟ್ರದ ಇಸ್ಲಾಮೀ ಚಟುವಟಿಕೆ ಮತ್ತು ಧರ್ಮ ಸಂಸ್ಥಾಪನೆಯ ಕಾರ್ಯಕ್ಕಾಗಿ ಲ್ಲಿನ ಸತ್ಯ ವಿಶ್ವಾಸಿಗಳು ಸಂಘಟಿಸುವುದು ಕಡ್ಡಾಯವಾಗಿದೆ. ಇಸ್ಲಾಮನ್ನು ಸರಿಯಾಗಿ ತಿಳಿದ ಾರಿಗೂ ಅದರಿಂದ ದೂರವಿರಲು ಸಾಧ್ಯವಿಲ್ಲ. ಅದೇ ವೇಳೆ ಹಾಗೆ ರಚಿಸುವ ಸಂಘಟನೆಯು ಲ್ ಜಮಾಅತ್'ಗೆ ಪರ್ಯಾಯವಾಗುವುದಿಲ್ಲ. ಬದಲಾಗಿ 'ಅಲ್ ಜಮಾಅತ್'ನೆಡೆಗೆ ಹೆಜ್ಜೆ ತ್ತು ಅದರ ಅಭಾವದಲ್ಲಿರುವ ಬದಲಿ ವ್ಯವಸ್ಥೆಯೆನಿಸುತ್ತದೆ. ಈ ವಾಸ್ತವಿಕತೆಯನ್ನು ವರಿಸಿ ಸಯ್ಯದ್ ಅಬುಲ್ ಆಲಾ ಹೀಗೆ ಬರೆದಿದ್ದಾರೆ; "ಇಸ್ಲಾಮಿನ ಎಲ್ಲ ಬೇಡಿಕೆಗಳನ್ನು ವಲ ವೈಯಕ್ತಿಕವಾಗಿ ಈಡೇರಿಸಲು ಸಾಧ್ಯವಿಲ್ಲ. ಅದಕ್ಕೆ ಸಂಘಟಿತ ಪ್ರಯತ್ನ ಅನಿವಾರ್ಯ. ರ್ಮದ ಒಂದು ಸಣ್ಣ ಅಂಶ ಮಾತ್ರ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದೆ. ಅದನ್ನು ನೀವು ್ಯಗೂಡಿಸಿದರೂ ಸಂಪೂರ್ಣ ಧರ್ಮದ ಸಂಸ್ಥಾಪನೆಯಾಗುವುದಿಲ್ಲ, ಸಂಪೂರ್ಣ ಧರ್ಮದ ಕ್ಷ್ಯ ನಿರ್ವಹಣೆ ಈಡೇರುವುದಿಲ್ಲ. ಮಾತ್ರವಲ್ಲ, ಸಾಮಾಜಿಕ ಜೀವನದಲ್ಲಿ ಕುಫ್ರ್‌ನ ವಸ್ಥೆ ಪ್ರಬಲವಾದರೆ ವೈಯಕ್ತಿಕ ಜೀವನದ ವಿವಿಧ ರಂಗಗಳಲ್ಲಿ ಕೂಡಾ ಧರ್ಮವನ್ನು ರೆ ನಿಲ್ಲಿಸುವುದು ಅಸಾಧ್ಯವಾಗುತ್ತದೆ. ಸಾಮಾಜಿಕ ವ್ಯವಸ್ಥೆಯ ಆಕ್ರಮಣವು ವೈಯಕ್ತಿಕ ಸ್ಲಾಮೀ ಜೀವನದ ವ್ಯಾಪ್ತಿಯನ್ನು ದಿನ ನಿತ್ಯ ಸಂಕುಚಿತ ಗೊಳಿಸುತ್ತದೆ. ಆದ್ದರಿಂದ ಪೂರ್ಣ ಧರ್ಮದ ಸ್ಥಾಪನೆ ಮತ್ತು ಅದರ ಸರಿಯಾದ ಸಾಕ್ಷ್ಯ ನಿರ್ವಹಣೆಗೆ ಸಂಘಟಿತ ಯತ್ನ ಅಗತ್ಯವಾಗಿದೆ. ಮುಸ್ಲಿಮನಾಗಿರುವುದರಿಂದ ಕಡ್ಡಾಯವಾಗುವ ಕರ್ತವ್ಯಗಳ ಸುವಳಿಕೆಯಿರುವವರು ಮತ್ತು ಅವುಗಳನ್ನು ನಿರ್ವಹಿಸಬೇಕೆಂದು ಮನಃಪೂರ್ವಕವಾಗಿ ಯಸುವವರೆಲ್ಲರೂ ಸಂಘಟಿತರಾಗುವುದು ಕಡ್ಡಾಯವಾಗಿದೆ. ಸಂಘಟಿತ ರೂಪದಲ್ಲಿ ರ್ಮದ ಸಂಸ್ಥಾಪನೆ ಮತ್ತು ಜನರನ್ನು ಅದರತ್ತ ಆಹ್ವಾನಿಸುವುದಕ್ಕಾಗಿ ಅವರು ಪ್ರಯತ್ನಿಸಬೇಕು.

'ಇಕಾಮತುದ್ದೀನ್' ಮತ್ತು 'ಸತ್ಯ ಪ್ರಚಾರ'ದ ಹಾದಿಗೆ ಅಡ್ಡ ಬರುವ ಎಲ್ಲ ಅಡೆ ತಡೆಗಳನ ಅವರು ನೀಗಿಸಬೇಕು. ಆದ್ದರಿಂದಲೇ ಧರ್ಮದಲ್ಲಿ ಸಂಘಟನೆಯನ್ನು ಕಡ್ಡಾಯ ಗೊಳಿಸಲಾಗಿದ ಧರ್ಮದ ಸಂಸ್ಥಾಪನೆ ಮತ್ತು ಸತ್ಯ ಪ್ರಚಾರಕ್ಕಾಗಿ ಮೊದಲು ಒಂದು ಸುಸಂಘಟಿತ ಪಕ್ಷವನ ನೆಲೆಗೊಳಿಸಿ ಅನಂತರ ಅಲ್ಲಾಹನ ಮಾರ್ಗದಲ್ಲಿ ತ್ಯಾಗ ಪರಿಶ್ರಮಗಳನ್ನು ನಡೆಸು ಕ್ರಮವನ್ನು ಅವಲಂಬಿಸಬೇಕಾಗಿದೆ. ಆದ್ದರಿಂದಲೇ ಸಂಘಟನಾ ರಹಿತ ಜೀವನವನ ಜಾಹಿಲಿಯ್ಯ ಜೀವನವೆಂದೂ ಸಂಘಟನೆಯಿಂದ ದೂರವಿರುವುದನ್ನು ಇಸ್ಲಾಮಿನೊಂದಿಗಿ ಸಂಬಂಧವನ್ನು ಕಡಿದುಕೊಳ್ಳುವುದಕ್ಕೆ ಸಮಾನವೆಂದೂ ಪರಿಗಣಿಸಲಾಗಿದೆ.

(ಸತ್ಯದ ಸಾಕ್ಷ್ಯ ಪುಟ: 23,24



# V

# ಆಂದೋಲನ ಸ್ಥಾಪನೆಯ ಪೂರ್ವ ಸಿದ್ಧತೆ

**1932**ರಲ್ಲಿ ಸೈಯದ್ ಅಬುಲ್ ಆಲಾ ಮೌದೂದಿಯವರು 'ತರ್ಜುಮಾನುಲ್ ಕುರ್‌ಆನ್' ಮಾಸಪತ್ರಿಕೆಯನ್ನು ವಹಿಸಿಕೊಂಡರು. ಅದು ಭಾರತದಲ್ಲಿ ಇಸ್ಲಾಮೀ ನವಜಾಗೃತಿಗೆ ನಾಂದಿಯಾಯಿತು. ಪ್ರಸ್ತುತ ಮಾಸ ಪತ್ರಿಕೆಯಲ್ಲಿ ಮೌಲಾನಾ ಮೌದೂದಿಯವರು ಮುಸ್ಲಿಮರಿಗೆ ಸನ್ಮಾರ್ಗವನ್ನು ಎತ್ತಿ ತೋರಿಸಿದರು. ತರ್ಜುಮಾನುಲ್ ಕುರ್‌ಆನ್‌ನ ಪ್ರಕಟಣೆಯ ಉದ್ದೇಶವನ್ನು ಅದರ ಹೊರಪುಟಗಳಲ್ಲಿ ಹಲವು ವರ್ಷಗಳ ಕಾಲ ಹಾಗೆ ಬರೆದಿದ್ದರು: "ಭಾರತದಲ್ಲಿ ಈ ರೀತಿಯ ನಿಯತಕಾಲಿಕ ಇದೊಂದೇ ಆಗಿದೆ. ದೇವ ವಾಣಿಯ ಉತ್ಥಾನವೇ ಇದರ ಗುರಿ. ಅಲ್ಲಾಹನ ಮಾರ್ಗದಲ್ಲಿ ಹೋರಾಟ-ಪರಿಶ್ರಮಗಳಿಗೆ (ಜಿಹಾದ್) ಆಹ್ವಾನ, ಜಗತ್ತಿನಲ್ಲಿ ಪ್ರಚಾರದಲ್ಲಿರುವ ವಿಚಾರಗಳು, ಅಭಿಪ್ರಾಯ, ಸಂಸ್ಕೃತಿ-ನಾಗರಿಕತೆ, ತತ್ವ ಸಿದ್ಧಾಂತ ಇತ್ಯಾದಿಗಳನ್ನು ಕುರ್‌ಆನ್‌ನ ದೃಷ್ಟಿಯಲ್ಲಿ ವಿಶ್ಲೇಷಿಸುವುದು, ಇಸ್ಲಾಮೀ ವಿಶ್ವಾಸ ದೃಷ್ಟಿಕೋನ ಮತ್ತು ಜೀವನ ವಿಧಾನಗಳನ್ನು ಆಧುನಿಕ ವಾತಾವರಣದಲ್ಲಿ ಹೇಗೆ ವ್ಯಾವಹಾರಿಕ ಗೊಳಿಸಬಹುದೆಂದು ವಿವರಿಸುವುದು; ತತ್ವ ಸಿದ್ಧಾಂತ, ವಿಜ್ಞಾನ, ಆರ್ಥಿಕ ವ್ಯವಸ್ಥೆ, ಸಾಮಾಜಿಕ ಪದ್ಧತಿ ಇತ್ಯಾದಿಗಳ ಕುರಿತು ಕುರ್‌ಆನ್‌ನ ದೃಷ್ಟಿಕೋನವನ್ನು ಸ್ಪಷ್ಟ ಪಡಿಸುವುದು ಈ ಮಾಸಪತ್ರಿಕೆಯ ವೈಶಿಷ್ಟ್ಯವಾಗಿದೆ. ಮುಸ್ಲಿಮ್ ಸಮುದಾಯವನ್ನು ಒಂದು ಹೊಸ ಜೀವನ ಹಾದಿಗೆ ಈ ನಿಯತಕಾಲಿಕವು ಆಮಂತ್ರಿಸುತ್ತದೆ; ಮನ ಮಸ್ತಿಷ್ಕಗಳನ್ನು ಇಸ್ಲಾಮೀಕರಿಸಿರಿ, ಇಸ್ಲಾಮೇತರ ಮಾರ್ಗಗಳನ್ನು ತೊರೆದು ಇಸ್ಲಾಮಿನ ನೇರ ಹಾದಿಯಲ್ಲಿ ನಡೆಯಿರಿ, ಕುರ್‌ಆನನ್ನು ಎತ್ತಿ ಹಿಡಿಯಿರಿ. ಈ ಲೋಕದಲ್ಲಿ ಅದರ ತತ್ವಗಳನ್ನು ಸಾಕ್ಷಾತ್ಕರಿಸಿ ಯಶಸ್ವಿ ಗೊಳಿಸಿರಿ-ಇದುವೇ ಆ ಕರೆ."

ಮೌದೂದಿ ಸಾಹೆಬ್‌ರ ಬರಹ, ಭಾಷಣ ಮತ್ತು ಚಟುವಟಿಕೆಯು ಕೇವಲ ಸೈದ್ಧಾಂತಿಕ ಸ್ವರೂಪದ್ದಾಗಿರಲಿಲ್ಲ. ಅವರ ಗುರಿಯು ಇಸ್ಲಾಮಿನ ಬಗ್ಗೆ ಪ್ರಬಂಧ (Thesis) ಮಂಡಿಸುವುದು ಅಥವಾ ಸಾಹಿತ್ಯ ರಚನೆ ಮಾಡುವುದಾಗಿರಲಿಲ್ಲ, ಬದಲಾಗಿ ಇಸ್ಲಾಮ್ ಮತ್ತು ಮುಸ್ಲಿಮ್ ವಿರೋಧಿ ಸವಾಲುಗಳನ್ನು ಎದುರಿಸುವುದೇ ಅವರ ಗುರಿಯಾಗಿತ್ತು. ಪಾಶ್ಚಾತ್ಯರ ವಿರೋಧ ಮತ್ತು ಕುಪ್ರಚಾರಗಳಿಂದ ವಿಚಲಿತಗೊಂಡ ಸಮುದಾಯದ ಶೋಚನೀಯಾವಸ್ಥೆಯಿಂದ ಮನನೊಂದು ಅವರು ಅಲ್ಲಾಹನ ಏಕತೆ ಮತ್ತು ಇಸ್ಲಾಮಿನ ಶ್ರೇಷ್ಠತೆಯನ್ನು ಎತ್ತಿ ಹಿಡಿದರು. ಕಾಲದ ಬೇಡಿಕೆಯ ಕುರಿತು ಮೌದೂದಿಯವರಿಗೆ ಸ್ಪಷ್ಟ ಪ್ರಜ್ಞೆ ಮತ್ತು ಪರಿಜ್ಞಾನವಿತ್ತು, ಅದನ್ನು ಅವರು ಹೀಗೆ ವಿವರಿಸಿದ್ದಾರೆ. ಪ್ರಥಮವಾಗಿ,

ಮುಸ್ಲಿಮ್ ಬುದ್ಧಿ ಜೀವಿಗಳಲ್ಲಿ ಪ್ರಭಾವ ಬೀರಿರುವ ಪಾಶ್ಚಾತ್ಯ ಸಂಸ್ಕೃತಿ ಮತ್ತು ವಿಚಾರಧಾರೆಗಳ ಆಕ್ರಮಣವನ್ನು ಪ್ರತಿಭಟಿಸಬೇಕು, ಇಸ್ಲಾಮಿನ ಸ್ವಂತ ಜೀವನ ಪದ್ಧತಿ, ಸಾಂಸ್ಕೃತಿಕ ಕ್ರಮ, ರಾಜಕೀಯ ವ್ಯವಸ್ಥೆ, ವಿಚಾರ ಧಾರೆ ಮತ್ತು ಶೈಕ್ಷಣಿಕ ಪದ್ಧತಿಯಿಂದ ಅವು ಪಾಶ್ಚಾತ್ಯ ಸಂಸ್ಕೃತಿ ಮತ್ತು ವಿಚಾರಧಾರೆಗಳಿಗಿಂತ ಉತ್ತಮವೆಂದು ಮನಗಾಣಿಸಬೇಕು. ನಾವು ಮುಸ್ಲಿಮರು, ಸಂಸ್ಕೃತಿಯನ್ನು ಬೇರೆ ಯಾರಿಂದಲಾದರೂ ಬೇಡ ಬೇಕಾಗಿದೆ ಎಂಬ ಭಾವನೆಯನ್ನು ಅವರ ಮನಸ್ಸುಗಳಿಂದ ತೊಡೆದು ಹಾಕಬೇಕು. ಜಗತ್ತಿನ ಇತರೇ ಪದ್ಧತಿಗಳಿಗಿಂತ ಉತ್ತಮವಾದ ಒಂದು ಸಮಗ್ರ ಜೀವನ ಪದ್ಧತಿ ತಮ್ಮ ಬಳಿಯಿದೆಯೆಂಬುದನ್ನು ಅವರಿಗೆ ನೆನಪಿಸಬೇಕು. ಅವರು ಹೇಡಿತನದಿಂದ ಅಂಗೀಕರಿಸುವ ಪಾಶ್ಚಾತ್ಯ ವ್ಯವಸ್ಥೆಯನ್ನು ನಿಷ್ಠುರವಾಗಿ ವಿಶ್ಲೇಷಿಸಿ ಅದರ ನಾನಾ ರೀತಿಯ ದೌರ್ಬಲ್ಯಗಳನ್ನು ಅನಾವರಣಗೊಳಿಸಬೇಕು.

ಈ ರಾಯಭಾರವನ್ನು ಮೌಲಾನಾ ಮೌದೂದಿಯವರು ತಮ್ಮ ಭಾಷಣ ಮತ್ತು ಬರಹಗಳ ಮೂಲಕ ಸ್ವತಃ ನಿರ್ವಹಿಸಿದರು. ತನ್ನ ಮುಂದಿರುವ ಸವಾಲುಗಳ ಸ್ಥಿತಿಯನ್ನು ಚೆನ್ನಾಗಿ ಮನಗಂಡಿದ್ದ ಮೌದೂದಿ ಸಾಹಬ್‌ರಿಗೆ ಬೇರೆ ಧೋರಣೆಯನ್ನು ಅಂಗೀಕರಿಸಲು ಸಾಧ್ಯವಿರಲಿಲ್ಲ. ಸೈಯದ್ ಮೌದೂದಿಯವರು ಅಣ್ಣ ಅಬುಲ್ ಖೈರ್‌ರೊಡನೆ ಆ ಬಗ್ಗೆ ಸೂಚಿಸಿದ್ದರು: "ಪರಿಸ್ಥಿತಿ ಗಂಭೀರವಾಗಿದೆ. ಒಂದು ಪ್ರಳಯ ಬರಲಿರುವಂತೆ ನನಗೆ ಭಾಸವಾಗುತ್ತಿದೆ. 1857ರಲ್ಲಿ ಬ್ರಿಟಿಷ್ ಆಡಳಿತದಿಂದ ಸಂಭವಿಸಿರುವುದಕ್ಕಿಂತ ಮಾರಕವಾದ ಪ್ರಳಯ. ಮುಸ್ಲಿಮರ ಧರ್ಮ ಮತ್ತು ಸ್ವಾತಂತ್ರ್ಯಕ್ಕೆ ಭಾರೀ ಅಪಾಯ ವುಂಟಾಗಲಿದೆ. ಮುಸ್ಲಿಮರನ್ನು ಈ ಅಪಾಯದ ಬಗ್ಗೆ ಎಚ್ಚರಗೊಳಿಸಲು ಪ್ರಯತ್ನಿಸಬೇಕಾದುದು ನನ್ನ ಕರ್ತವ್ಯವೆಂದು ಪರಿಗಣಿಸಿದ್ದೇನೆ. ಈ ಅವಕಾಶವನ್ನು ವ್ಯರ್ಥಗೊಳಿಸಬಾರದು. ನನ್ನ ಧ್ವನಿಯಲ್ಲಿ ಪ್ರಾಮಾಣಿಕತೆಯಿದ್ದರೆ ಈ ಭಾವನೆ ಸಾಕ್ಷಾತ್ಕಾರವಾಗುವುದೆಂದು ನನಗೆ ಭರವಸೆಯಿದೆ. ನನ್ನ ವಿಷಯವನ್ನು ನಾನು ಅಲ್ಲಾಹನಿಗೆ ಸಮರ್ಪಿಸಿದ್ದೇನೆ. ಆತನು ತನ್ನ ದಾಸರೊಡನೆ ಅತ್ಯಧಿಕ ಸಹಾನುಭೂತಿಯಿರುವವನಲ್ಲವೇ."

## ಸಂಕುಚಿತ ರಾಷ್ಟ್ರೀಯತೆ ಮತ್ತು ಜನಾಂಗೀಯ ಪಕ್ಷಪಾತದ ವಿರುದ್ಧ

ಪಾಶ್ಚಾತ್ಯ ವಿಚಾರ, ಸಿದ್ಧಾಂತ ಮತ್ತು ಸಂಸ್ಕೃತಿಯ ಕೆಡುಕು ಹಾಗೂ ದೌರ್ಬಲ್ಯಗಳನ್ನು ಎತ್ತಿ ತೋರಿಸಿ ಅವುಗಳಿಂದ ಸಮುದಾಯವನ್ನು ಸಂರಕ್ಷಿಸಲು ಸೈಯದ್ ಮೌದೂದಿಯವರು ತೀವ್ರವಾಗಿ ಪ್ರಯತ್ನಿಸಿದರು. ಅದರೊಂದಿಗೆ ಭಾರತೀಯ ಜನತೆಯನ್ನು ಗಾಢವಾಗಿ ಪೀಡಿಸಿದ್ದ ಸಂಕುಚಿತ ರಾಷ್ಟ್ರೀಯತೆ ಮತ್ತು ಜನಾಂಗೀಯತೆಯ ವಿಪತ್ತುಗಳ ವಿಶ್ಲೇಷಣೆಯನ್ನೂ ಮಾಡಿದರು. ಅವರು ಹೀಗೆ ಬರೆದರು: "ಕೆಲವರು ಮುಸ್ಲಿಮರಿಗೂ 'ಕೌಮ್' (ಜನಾಂಗ) ಎಂಬ ಪದವನ್ನು ಬಳಸುತ್ತಾರೆ. ಮುಸ್ಲಿಮ್ ಸಂಘಟನೆಗೆ 'ಕೌಮ್' ಅಥವಾ 'ಉಮ್ಮತ್'

ಎಂಬ ಪದವನ್ನು ಯಾವ ಅರ್ಥದಲ್ಲಿ ಪ್ರಯೋಗಿಸಲಾಗುತ್ತಿದೆಯೆಂಬುದನ್ನು ಅವರು ಗ್ರಹಿಸುವುದಿಲ್ಲ. ಇದರಿಂದಾಗಿ, ಹಿಂದೂಗಳು ಒಂದು ಜನಾಂಗವಾಗಿರುವಂತೆ ಅಥವಾ ಜರ್ಮನರು ಒಂದು ಜನಾಂಗವಾಗಿರುವಂತೆಯೇ ಮುಸ್ಲಿಮರೂ ಒಂದು ಜನಾಂಗವೆಂದು ಅವರು ಭಾವಿಸುತ್ತಾರೆ. ಇದು ವಸ್ತುತಃ ತಪ್ಪು ತಿಳುವಳಿಕೆಯಾಗಿದೆ. ಅದು ನೈತಿಕ ಮತ್ತು ಸಾಮಾಜಿಕ ಕಾರ್ಯವಿಧಾನವನ್ನೂ ರಾಜಕೀಯ ನೀತಿಯನ್ನೂ ದುಸ್ತರಗೊಳಿಸುತ್ತದೆ."

ಸೈಯದ್ ಮೌದೂದಿಯವರು ನೈಜ ಮುಸ್ಲಿಮ್ ಯಾರೆಂದು ವಿವರಿಸಿದ್ದಾರೆ: ಕೇವಲ ಮುಸ್ಲಿಮ್ ತಂದೆ ತಾಯಂದಿರಿಗೆ ಜನಿಸಿರುವರೆಂಬ ಕಾರಣದಿಂದ ಯಾರೂ ಮುಸ್ಲಿಮರಾಗುವುದಿಲ್ಲ. ಇಸ್ಲಾಮನ್ನು ಅಂಗೀಕರಿಸುವವರು ಮಾತ್ರ ಮುಸ್ಲಿಮರಾಗುತ್ತಾರೆ. ಇಸ್ಲಾಮನ್ನು ತಿರಸ್ಕರಿಸಿದಾತನು ಮುಸ್ಲಿಮನಾಗುವುದಿಲ್ಲ. ಬ್ರಾಹ್ಮಣ, ರಜಪೂತ, ದಲಿತ, ಆಂಗ್ಲೇಯ ಅಥವಾ ಇತಿಯೋಪಿಯಾದವ, ಹೀಗೆ ಯಾರೇ ಆಗಿರಲಿ ಇಸ್ಲಾಮನ್ನು ಅಂಗೀಕರಿಸಿದರೆ ಮುಸ್ಲಿಮರಾಗುತ್ತಾರೆ. ಆದ್ದರಿಂದ ಇಸ್ಲಾಮಿ ನೀತಿನಿಯಮಗಳನ್ನು ಪಾಲಿಸಿದರೆ ಮಾತ್ರ ಓರ್ವನು ಮುಸ್ಲಿಮನಾಗುತ್ತಾನೆ. ಪಾಲಿಸದಿದ್ದರೆ ಆತನು ಮುಸ್ಲಿಮನಾಗುವುದಿಲ್ಲ. ಸೈಯದ್ ಅಥವಾ ಪಠಾಣನ ಮಗನಾಗಿದ್ದರೂ ಆತನು ಮುಸ್ಲಿಮ್ ಸಮಾಜದಿಂದ ಹೊರಗಿರುತ್ತಾನೆ. ಸಂಕುಚಿತ ರಾಷ್ಟ್ರೀಯವಾದದ ಅಪಾಯಗಳನ್ನು ಅವರು ಹೀಗೆ ವಿವರಿಸಿದ್ದಾರೆ: "ವಂಶ, ದೇಶ, ಭಾಷೆ, ವರ್ಣ ಇತ್ಯಾದಿ ಭೇದ ಭಾವಗಳಿಂದ ಸಂಕುಚಿತ ರಾಷ್ಟ್ರೀಯವಾದವು ವಿಶಾಲವಾದ ಮಾನವ ಸಮಾಜವನ್ನು ಶಿಥಿಲಗೊಳಿಸುತ್ತದೆ. ಈ ವಿಚ್ಛಿದ್ರಕಾರಿ ಶಕ್ತಿಗಳು ಮಾನವಕುಲವನ್ನು ಸಹಸ್ರಾರು ವಿಭಾಗಗಳಾಗಿ ವಿಂಗಡಿಸುತ್ತದೆ. ಪ್ರತಿಯೊಂದು ವಿಭಾಗವೂ ಇನ್ನೊಂದು ವಿಭಾಗದ ನಾಶಕ್ಕಾಗಿ ಪ್ರಯತ್ನಿಸುತ್ತದೆ. ಅವರಿಗೆ ಯಾವುದಾದರೊಂದು ವಿಭಾಗವನ್ನು ನಾಶಪಡಿಸಲು ಸಾಧ್ಯವಾಗಬಹುದು. ಆದರೆ, ಆ ಮೂಲಕ ಇತರ ವಿಭಾಗಗಳಲ್ಲಿ ಯಾವುದೇ ಸುಧಾರಣೆಯುಂಟು ಮಾಡಲು ಸಾಧ್ಯವಿಲ್ಲ."

ಸಂಕುಚಿತ ರಾಷ್ಟ್ರೀಯವಾದದ ದುಷ್ಪರಿಣಾಮಗಳನ್ನು ವಿವರಿಸಿದ ಬಳಿಕ ಇಸ್ಲಾಮಿ ಧೋರಣೆಯನ್ನು ಅವರು ಹೀಗೆ ಸ್ಪಷ್ಟ ಪಡಿಸಿದ್ದಾರೆ: "ನೀವು ಕುರ್‌ಆನನ್ನು ಸಾದ್ಯಂತ ಪರಿಶೀಲಿಸಿರಿ. ಕೋಮು-ರಾಷ್ಟ್ರೀಯ, ಉಚ್ಚ-ನೀಚತೆಗಳನ್ನು ಬೆಂಬಲಿಸುವ ಒಂದು ಪದವೂ ಅದರಲ್ಲಿ ಕಾಣ ಸಿಗಲಾರದು. ಕುರ್‌ಆನ್, ಸಮಗ್ರ ಮಾನವಕುಲದೊಡನೆ ಮಾತಾಡುತ್ತದೆ. ಜಗತ್ತಿನ ಸಕಲ ಜನರನ್ನು ಅದು ಸತ್ಯ ಮತ್ತು ಒಳಿತಿನೆಡೆಗೆ ಆಹ್ವಾನಿಸುತ್ತದೆ."

ಮತ್ತೊಂದೆಡೆ ಮೌದೂದಿ ಸಾಹೆಬ್ ಹೀಗೆ ಬರೆದಿದ್ದಾರೆ: "ಇಸ್ಲಾಮಿನ ಸತ್ಯ ಪ್ರಚಾರಕ್ಕೆ ಕುಫ್ರ್ ಮತ್ತು ಶಿರ್ಕ್‌ನ ಬಳಿಕ ಜನಾಂಗೀಯ ರಾಷ್ಟ್ರೀಯ ಪಿಶಾಚಿಯೇ ಮಹಾ ವೈರಿಯಾಗಿದೆ."

ಇಸ್ಲಾಮಿ ಸಾಮುದಾಯಿಕತೆಯನ್ನು ಅವರು ಹೀಗೆ ವಿಶ್ಲೇಷಿಸಿದ್ದಾರೆ: ಅಲ್ಲಾಹ ಮತ್ತು ಪ್ರವಾದಿಯವರು(ಸ) ಸಂಪೂರ್ಣ ತರ್ಕಬದ್ಧವಾದ ಬುನಾದಿಗಳಲ್ಲಿ ಸಾಮೂಹಿಕತೆಯನ್ನು ಕಟ್ಟಿ ಬೆಳೆಸಿದ್ದಾರೆ. ಅದರನ್ವಯ ಒಂದು ವಿವೇಚನೆಯಿದೆ. ಆದರೆ ಅದು ಲೌಕಿಕ ಅಥವಾ ಸಾಂಪ್ರದಾಯಿಕ ವಿವೇಚನೆಯ ಬದಲಾಗಿ ಆಧ್ಯಾತ್ಮಿಕ ಮತ್ತು ತಾತ್ವಿಕ ವಿವೇಚನೆಯಾಗಿದೆ. ಅಲ್ಲಾಹನು ಸಮಾಜದ ಮುಂದೆ ಅಪ್ಪಟ ಸತ್ಯವನ್ನು ಸಮರ್ಪಿಸುತ್ತಾನೆ ಅದೇ ಇಸ್ಲಾಮ್. ಅಲ್ಲಾಹನ ದಾಸರಾಗಿ ಆತನನ್ನು ಅನುಸರಿಸಿರಿ. ಸತ್ಕರ್ಮವೆಸಗಿರಿ, ಧರ್ಮನಿಷ್ಠೆ ಮತ್ತು ಪರಿಶುದ್ಧಿಯನ್ನು ಬೆಳೆಸಿರಿ ಎಂಬೀ ವಿಷಯಗಳತ್ತ ಇಸ್ಲಾಮ್ ಸಕಲ ಮಾನವರನ್ನು ಆಹ್ವಾನಿಸುತ್ತದೆ. ಆ ಆಹ್ವಾನವನ್ನು ಸ್ವೀಕರಿಸಿದ ಎಲ್ಲರೂ ಒಂದೇ ಸಮುದಾಯದಲ್ಲಿ ಸೇರುತ್ತಾರೆ. ಆ ಆಹ್ವಾನವನ್ನು ಸ್ವೀಕರಿಸದವರು ಬೇರೊಂದು ಸಮುದಾಯವಾಗುತ್ತಾರೆ. ಹೀಗೆ ಇಸ್ಲಾಮಿನ ಮುಂದೆ 2 ಸಮುದಾಯಗಳಿವೆ. 1. ಇಸ್ಲಾಮ್ ಮತ್ತು ವಿಶ್ವಾಸದ ಸಮುದಾಯ. ಅದರ ವ್ಯಕ್ತಿಗಳೆಲ್ಲರೂ ಒಂದೇ ಉಮ್ಮತ್ ಆಗಿದ್ದಾರೆ. 2. ಕುಫ್ರ್ ಮತ್ತು ದುರ್ಮಾರ್ಗದ ಸಮುದಾಯ ಅದರ ಜನರು ಭಿನ್ನವಾದ ಬೇರೊಂದು ಸಮುದಾಯವಾಗಿದ್ದಾರೆ.

ಹೀಗೆ ಪಾಶ್ಚಾತ್ಯ ಲೌಕಿಕ ಸಿದ್ಧಾಂತಗಳನ್ನೂ ಅವುಗಳ ಭಾಗವಾಗಿರುವ ಸಂಕುಚಿತ ರಾಷ್ಟ್ರೀಯತೆಯನ್ನೂ ಮೌಲಾನಾ ಮೌದೂದಿ ಕಟುವಾಗಿ ಟೀಕಿಸಿದರು: ಅದರ ಭಾರತೀಯ ರೂಪವಾಗಿರುವ ಹಿಂದೂ ರಾಷ್ಟ್ರೀಯತೆಯನ್ನೂ ಅದಕ್ಕೆ ಭಾರತೀಯ ರಾಷ್ಟ್ರೀಯತೆಯ ಆವರಣ ತೊಡಿಸಿರುವುದನ್ನೂ ಅವರು ತೀವ್ರವಾಗಿ ವಿರೋಧಿಸಿದರು. ಅದೇ ವೇಳೆ ಅದರ ಪ್ರತಿಫಲನ ಮತ್ತು ಪ್ರತಿಕ್ರಿಯೆಯಾಗಿ ರೂಪುಗೊಂಡ ಮುಸ್ಲಿಮ್ ಜನಾಂಗೀಯ ವಾದವನ್ನೂ ವಿಮರ್ಶಿಸಿದರು. ಸಂಕ್ಷಿಪ್ತದಲ್ಲಿ, ಭಾರತೀಯ ಸಮಾಜವನ್ನು ಕೊರೆಯುತ್ತಿದ್ದ ನೂತನ ಜಾಹಿಲಿಯ್ಯತ್‌ನ ಎಲ್ಲಾ ಅಂಶಗಳನ್ನೂ ವಿಶ್ಲೇಷಿಸಿ ಅವುಗಳ ವಿಪತ್ತುಗಳನ್ನೂ ವಿವರಿಸಿ ಅವುಗಳಿಂದ ಸಮುದಾಯವನ್ನು ವಿಮೋಚನೆಗೊಳಿಸಲು ಪ್ರಯತ್ನಿಸಿದರು.

ಸೈಯದ್ ಮೌದೂದಿಯವರು, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪ್ರತಿಪಾದಿಸುವ ಸಂಕುಚಿತ ರಾಷ್ಟ್ರೀಯತೆಯನ್ನು ವಿಮರ್ಶಿಸಿದಾಗ ಮುಸ್ಲಿಮ್ ಲೀಗ್ ಅವರನ್ನು ಬಲವಾಗಿ ಬೆಂಬಲಿಸಿ ಅವರ ಲೇಖನಗಳನ್ನು ಧಾರಾಳವಾಗಿ ಬಳಸಿಕೊಂಡಿತು. ಅನಂತರ ಮುಸ್ಲಿಮ್ ಲೀಗ್ ಪ್ರತಿಪಾದಿಸುವ ಅಪಾಯಕಾರಿ ಜನಾಂಗೀಯ ವಾದವನ್ನು ವಿರೋಧಿಸಿದಾಗ ಕಾಂಗ್ರೆಸ್ಸಿನವರು ಅವರನ್ನು ಬೆಂಬಲಿಸಿದರು. ಹೀಗೆ ಸಂಕುಚಿತ ರಾಷ್ಟ್ರೀಯತೆ ಮತ್ತು ಜನಾಂಗೀಯತೆಯನ್ನು ವಿಮರ್ಶಿಸಿದ ಮೌದೂದಿಯವರು ರಾಷ್ಟ್ರೀಯ ಸ್ವಾತಂತ್ರ್ಯ ಮತ್ತು ಸಮುದಾಯದ ನೈಜ ಬೇಡಿಕೆಗಳನ್ನು ಬಲವಾಗಿ ಬೆಂಬಲಿಸಿದರು.

## ಕೀಳರಿಮೆಯ ವಿರುದ್ಧ

ಪಾಶ್ಚಾತ್ಯ ಸಾಮ್ರಾಜ್ಯಶಾಹಿ ಶಕ್ತಿಗಳ ತೀವ್ರ ಪ್ರಚಾರದಿಂದ ಮುಸ್ಲಿಮರಲ್ಲಿ ಮೂಡಿದ ಕೀಳರಿಮೆಯನ್ನೂ ಇಸ್ಲಾಮಿ ಶರೀಅತ್‌ನ ಬಗೆಗಿನ ನಿರ್ಲಕ್ಷ್ಯವನ್ನೂ ನಿವಾರಿಸಲು ಅಬುಲ್ ಆಲಾ ಮೌದೂದಿಯವರು ಆದಷ್ಟು ಪ್ರಯತ್ನಿಸಿದರು. ಶರೀಅತ್‌ನ ಬಗ್ಗೆ ಗೌರವ ಮೂಡಿಸಿ ಮುಸ್ಲಿಮರನ್ನು ಅದಕ್ಕಾಗಿ ಉತ್ತೇಜಿಸಲಿಕ್ಕಾಗಿ ಅವರು ಹೀಗೆ ಬರೆದರು: "ಈ ಶರೀಅತ್ ಹೇಡಿಗಳಿಗಾಗಿ ಅವತೀರ್ಣಗೊಂಡುದಲ್ಲ; ಸ್ವೇಚ್ಛೆಯ ದಾಸರಿಗಾಗಿ ಅಥವಾ ಲೌಕಿಕತೆಯ ಗುಲಾಮರಿಗಾಗಿ ಅವತೀರ್ಣಗೊಂಡುದಲ್ಲ; ಗಾಳಿಯ ದಿಕ್ಕಿಗನುಸಾರ ಹಾರಾಡುವ ಕಸಕಡ್ಡಿಗಳಿಗಾಗಿ, ಪ್ರವಾಹದೊಂದಿಗೆ ಸಾಗುವ ಕ್ರಿಮಿಕೀಟಗಳಿಗಾಗಿ, ಓತಿಯಂತೆ ಬಣ್ಣ ಬದಲಾಯಿಸುವ ಬಣ್ಣವಿಲ್ಲದ ವಸ್ತುಗಳಿಗಾಗಿಯೂ ಶರೀಅತ್ ಅವತೀರ್ಣಗೊಂಡಿಲ್ಲ; ಬದಲಾಗಿ, ಗಾಳಿಯ ದಿಕ್ಕನ್ನು ಬದಲಾಯಿಸುವ, ಪ್ರವಾಹದ ವಿರುದ್ಧ ದಿಕ್ಕಿಗೆ ಈಜುವ, ಎಲ್ಲ ವರ್ಣಗಳನ್ನೂ ತೊರೆದು ದೇವವರ್ಣವನ್ನು ಸ್ವೀಕರಿಸುವ ದೃಢ ನಿರ್ಧಾರ ಮಾಡಿದ ಧೀರೋದ್ಧಾತರಿಗಾಗಿ ಇಸ್ಲಾಮಿ ಶರೀಅತ್ ಅವತೀರ್ಣಗೊಂಡಿದೆ. ನೈಜ ಮುಸ್ಲಿಮ್ ಎಂದರೆ, ಪ್ರವಾಹದ ದಿಕ್ಕಿಗೆ ಈಜುವವನಲ್ಲ. ಜೀವನದ ನದಿಯನ್ನು ತನ್ನ ವಿಶ್ವಾಸಗಳಿಗನುಸಾರವಾಗಿ ಸನ್ಮಾರ್ಗದತ್ತ ತಿರುಗಿಸುವುದೇ ಮುಸ್ಲಿಮನ ಕರ್ತವ್ಯವಾಗಿದೆ. ಕ್ರಾಂತಿ ಮತ್ತು ಪ್ರಗತಿಯು ಯಾವಾಗಲೂ ಶಕ್ತಿಯ ಪರಿಣಾಮದಿಂದ ಪ್ರಕಟವಾಗುತ್ತದೆ. ಶಕ್ತಿಯೆಂದರೆ ಕರಗುವುದರ ಹೆಸರಲ್ಲ. ಕರಗಿಸುವುದರ ಹೆಸರಾಗಿದೆ. ಹಿಂಜರಿಯುವುದನ್ನಲ್ಲ, ಹಿಂಜರಿಸುವುದನ್ನು ಶಕ್ತಿಯೆನ್ನಲಾಗುತ್ತದೆ. ಪುರುಷತ್ವವಿಲ್ಲದ ಹೇಡಿಗಳು ಭೂಮಿಯಲ್ಲಿ ಎಂದೂ ಕ್ರಾಂತಿಯನ್ನು ಸೃಷ್ಟಿಸಿಲ್ಲ. ಯಾವುದೇ ತತ್ವ ಸಿದ್ಧಾಂತ, ಜೀವನೋದ್ದೇಶ ಅಥವಾ ಧ್ಯೇಯವಿಲ್ಲದ, ಕೇವಲ ಸುಖ ಸೌಲಭ್ಯಗಳನ್ನೇ ಗುರಿಯಾಗಿಸಿರುವ, ಯಾವ ಕೋನಕ್ಕೂ ವಾಲುವ, ಪರಿಸರದ ಒತ್ತಡಗಳಿಗೆ ಮಣಿಯುವ ಜನರಿಗೆ ಮಾನವೇತಿಹಾಸದಲ್ಲಿ ಹೇಳತಕ್ಕಂತಹ ಏನನ್ನೂ ಸಾಧಿಸಲಾಗುವುದಿಲ್ಲ. ಇತಿಹಾಸ ನಿರ್ಮಾಣವು ಕೇವಲ ವೀರರ ಕೆಲಸವಾಗಿದೆ. ಅವರು ತ್ಯಾಗ ಹೋರಾಟಗಳಿಂದ ಇತಿಹಾಸ ನಿರ್ಮಿಸುತ್ತಾರೆ. ಜೀವನದ ದಿಕ್ಕನ್ನು ಬದಲಾಯಿಸುತ್ತಾರೆ. ತತ್ವ ಸಿದ್ಧಾಂತಗಳನ್ನು ಪರಿವರ್ತಿಸುತ್ತಾರೆ. ಕಾಲದ ಮುಖಭಾವವನ್ನು ಬದಲಾಯಿಸುತ್ತಾರೆ. ಇತರ ಬಣ್ಣದಲ್ಲಿ ಮುಳುಗುವ ಬದಲಾಗಿ ಸ್ವಂತ ವರ್ಣದಲ್ಲಿ ಇತರರನ್ನು ಮುಳುಗಿಸುತ್ತಾರೆ."

ಹೀಗೆ ಮುಸ್ಲಿಮ್ ಸಮುದಾಯದಲ್ಲಿ ಆದರ್ಶ ಪ್ರಜ್ಞೆ ಮತ್ತು ಕರ್ಮಸ್ಫೂರ್ತಿಯನ್ನು ಉತ್ತೇಜಿಸಿ ಆತ್ಮ ವಿಶ್ವಾಸ ಬೆಳೆಸಲಿಕ್ಕಾಗಿ ನಿರಂತರ ಪ್ರಯತ್ನಿಸಿದ ಸೈಯದ್ ಮೌದೂದಿಯವರು ಕಲ್ಪನೆಯಲ್ಲಿರುವ ನವೋತ್ಥಾನದ ರೂಪರೇಷೆಗಳನ್ನು ಹೀಗೆ ಸಮರ್ಪಿಸಿದರು: "ನಾನೋರ್ವ ನವೀಕರಣ ವಾದಿಯಲ್ಲ, ಸೇವೆ ಕೆಲಸಗಳಿಂದ ಮುಗಿಸ ಬಯಸುತ್ತಿಲ್ಲ, ಬದಲಾಗಿ

ಪುನರ್ ನಿರ್ಮಾಣವೇ ನನ್ನ ಬಯಕೆಯಾಗಿದೆ. ಇಂದಿನ ಮಾನವ ಜೀವನವೆಂ ಕಟ್ಟಡವನ್ನು ಕೆಡಹಿ ಅದರ ಸ್ಥಾನದಲ್ಲಿ ಬೇರೊಂದು ಜೀವನ ಸೌಧವನ್ನು ನಿರ್ಮಿಸುವು ನನ್ನ ಉದ್ದೇಶ. ಅರ್ಥಾತ್, ಶುದ್ಧ ಇಸ್ಲಾಮಿ ತತ್ವ ಸಿದ್ಧಾಂತಗಳ ಬುನಾದಿಯ ಜೀವನದ ಎಲ್ಲ ರಂಗಗಳನ್ನೂ ಪುನರುದ್ಧರಿಸುವುದು. ಸಮಗ್ರ ಮತ್ತು ಸರ್ವತೋಮು ನಿರ್ಮಾಣ ಕಾರ್ಯವು ಒಂದು ವಿದ್ರೋಹವಾಗಿರಬಹುದು. ಆದರೆ ನಾನು ಅದನ್ ಬಯಸುತ್ತೇನೆ. ಆಂಶಿಕ ವಿದ್ರೋಹಿಗಳು ಎಲ್ಲೆಡೆಯೂ ಇದ್ದಾರೆ. ಈ ವಿಗ್ರಹಾಲಯದ ಕೆಲವರು ಬೇರೆ ಯಾವುದೋ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ. ಎಲ್ಲ ವಿಗ್ರಹಗಳನ ಧ್ವಂಸಗೊಳಿಸಿರಿ, ಆದರೆ ನನ್ನ ವಿಗ್ರಹವನ್ನು ಮುಟ್ಟ ಬೇಡಿರೆಂದು ಪ್ರತಿಯೊಬ್ಬರ ಅಪೇಕ್ಷಿಸುತ್ತಿದ್ದಾರೆ. ಯಾವುದಾದರೊಂದು ಹಂತ ಬಂದಾಗ ಇಂಥ ಆಂಶಿಕ ವಿದ್ರೋಹಿಗ ನಮ್ಮನ್ನು ಕೈಬಿಡುವುದು ಖಚಿತ. ಓರ್ವ ಪರಿಪೂರ್ಣ ವಿದ್ರೋಹಿ ಮಾತ್ರ ನಮ್ಮೊಡ ಸಹಕರಿಸಲು ಸಾಧ್ಯವಾಗಬಹುದು."

ಮೌಲಾನಾ ಮೌದೂದಿಯವರು ಈ ಮಾತುಗಳನ್ನು 1939ರಲ್ಲಿ ಬರೆದಿದ್ದರು. ಮೂಲಕ ಅವರು ಇಸ್ಲಾಮಿ ಆಂದೋಲನದ ಸ್ಥಾಪನೆಗೆ ರಂಗ ಸಜ್ಜುಗೊಳಿಸುತ್ತಿದ್ದರ ಸಹಕಾರಿಗಳನ್ನು ಗುರುತಿಸಿ ಸಂಘಟಿಸುವ ಪ್ರಯತ್ನವೂ ಅದರಲ್ಲಿ ಅಡಕವಾಗಿತ್ತು. ತರುವಾ ತರ್ಜಮಾನ್‌ನ ಸಂಚಿಕೆಗಳಲ್ಲಿ ಸಂಘಟನೆಯ ರಚನೆಗೆ ಹಿನ್ನೆಲೆ ಒದಗಿಸುವ ಲೇಖನಗಳನ ಪ್ರಕಟಿಸುತ್ತಲಿದ್ದರು. ಹೀಗೆ ಅವಶ್ಯಕ ಪೂರ್ವಸಿದ್ಧತೆಗಳನ್ನು ನಡೆಸಿದ ಬಳಿಕ ಸೈಯದ ಮೌದೂದಿಯವರು ಜಮಾಅತೆ ಇಸ್ಲಾಮಿಯ ಸ್ಥಾಪನೆಗೆ ಕೈ ಹಾಕಿದರು.



VI

# ಸಂಘಟನೆಯ ಸ್ಥಾಪನೆ

ಸೈಯದ್ ಅಬುಲ್ ಆಲಾ ಮೌದೂದಿಯವರು 1941ರಲ್ಲಿ ತರ್ಜುಮಾನುಲ್ ುರ್‌ಆನ್‌ನಲ್ಲಿ ಒಂದು ಉತ್ತಮ ಜಮಾಅತ್‌ನ ಅವಶ್ಯಕತೆ ಎಂಬ ಲೇಖನವನ್ನು ಬರೆದರು. ಿವಿಷ್ಯದ ಅಂಧಕಾರದಿಂದ ವಿಮೋಚನೆ ಹೊಂದಿ ಇಸ್ಲಾಮಿನ ಅನುಗ್ರಹ ಪ್ರಾಪ್ತಿಗೆ ಕೇವಲ ುತ್ತಮ ಸಿದ್ಧಾಂತಗಳು ಸಾಕಾಗಲಾರವು. ಒಂದು ಉತ್ತಮ ಸಂಘಟನೆಯೂ ಅತ್ಯಗತ್ಯವಾಗಿದೆ.

ತರುವಾಯ 1941ರ ಫೆಬ್ರವರಿಯಲ್ಲಿ ನಾನು ಸಮರ್ಥಿಸಿರುವ ವಿಚಾರಧಾರೆಯನ್ನು ಂಗೀಕರಿಸಿ ಕಾರ್ಯ ನಿರ್ವಹಿಸಲಿಚ್ಛಿಸುವವರು ನನಗೆ ತಿಳಿಸಬೇಕೆಂದು ತರ್ಜುಮಾನುಲ್ ುರ್‌ಆನ್ ಮೂಲಕ ವಿನಂತಿಸಿದರು. ಏಳೆಂಟು ವರ್ಷಗಳಿಂದ ಸೈಯದ್ ಮೌದೂದಿಯವರ ೇಖನಗಳನ್ನು ಓದಿ ಭಾಷಣಗಳನ್ನು ಆಲಿಸಿದ್ದ ಸಹಸ್ರಾರು ಜನರು ಒಂದು ಇಸ್ಲಾಮಿ ಂಘಟನೆಯ ಅಗತ್ಯವನ್ನು ಮನಗಂಡಿದ್ದರು. ಆ ಪೈಕಿ ಅನೇಕ ಮಂದಿ ಅನುಕೂಲ ್ರತಿಕ್ರಿಯೆ ವ್ಯಕ್ತಪಡಿಸಿ ಪತ್ರ ಬರೆದರು. ಹೀಗೆ ಸನ್ನದ್ಧರಾದ 150 ಮಂದಿಗೆ ಅಬುಲ್ ಆಲಾ ಪತ್ರ ಬರೆದರು. 1941ರ ಅಗಸ್ಟ್ 25ರಂದು ತರ್ಜುಮಾನುಲ್ ಕುರ್‌ಆನ್‌ನ ಕಛೇರಿಗೆ ುರುವಂತೆ ತಿಳಿಸಿದರು. ಕೆಲವರು 2-3 ದಿನ ಮುಂಚೆಯೇ ಅಲ್ಲಿಗೆ ಬಂದರು.

ಆಗಸ್ಟ್ 26 (1360 ಶಅಬಾನ್ 2)ರಂದು ಬೆಳಿಗ್ಗೆ 8ಗಂಟೆಗೆ ಸಭೆಯು ಔಪಚಾರಿಕವಾಗಿ ಆರಂಭಗೊಂಡಿತು. ಅದಕ್ಕಿಂತ ಮೊದಲೇ ಜಮಾಅತೆ ಇಸ್ಲಾಮಿಯ ಸಂವಿಧಾನದ ಕರಡು ಪ್ರತಿಯನ್ನು ಸಭಿಕರಿಗೆ ವಿತರಿಸಿ, ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಅದನ್ನು ಪರಿಶೀಲಿಸುವಂತೆ ವಿನಂತಿಸಲಾಗಿತ್ತು. ಸ್ಥಾಪನಾ ಸಭೆಯ ಪ್ರಾರಂಭ ಭಾಷಣದಲ್ಲಿ ಸೈಯದ್ ಮೌದೂದಿಯವರು ಒಂದು ಇಸ್ಲಾಮಿ ಆಂದೋಲನದ ರಚನೆಗಾಗಿ ನಡೆದ ಗತ ಚಟುವಟಿಕೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿದರು. ಅದರಲ್ಲಿ ಅವರು ಹೀಗೆ ಹೇಳಿದರು: "ನಾನೂ ಹಿಂದೆ ಪರಂಪರಾಗತ ಧರ್ಮ ವಿಶ್ವಾಸಿಯಾಗಿದ್ದೆ. ಜಾತೀಯ ಧರ್ಮದ ಓರ್ವ ಅನುಯಾಯಿ. ವಸ್ತು ಸ್ಥಿತಿಯನ್ನು ಅರಿತ ಬಳಿಕ ಅಂಥ ಸ್ಥಿತಿ ಅರ್ಥ ಹೀನವೆಂದು ನನಗೆ ಭಾಸವಾಯಿತು. ಆದ್ದರಿಂದ ಅಲ್ಲಾಹನ ಗ್ರಂಥ ಮತ್ತು ಪ್ರವಾದಿ ಚರ್ಯೆಯನ್ನು ಶ್ರದ್ಧೆಯಿಂದ ಕಲಿಯ ತೊಡಗಿದೆ. ಇಸ್ಲಾಮನ್ನು ಹೊಸತಾಗಿ ಕಲಿತೆ. ಅದರಿಂದ ನನಗೆ ವಿಶ್ವಾಸ ಮತ್ತು ತಿಳುವಳಿಕೆ ಮೂಡಿತು. ಕ್ರಮೇಣ ಇಸ್ಲಾಮ್ ಸಮಗ್ರ ಮತ್ತು ಸುವ್ಯವಸ್ಥಿತ ಜೀವನ ಪದ್ಧತಿಯೆಂದು ವ್ಯಕ್ತವಾಯಿತು. ಅಲ್ಲಾಹನ ಅನುಗ್ರಹದಿಂದ ಅದರಿಂದ ಸ್ಪಷ್ಟ

ತಿಳುವಳಿಕೆ ಮತ್ತು ಮನಃಶ್ಶಾಂತಿ ದೊರೆಯಿತು. ತರುವಾಯ ಸ್ವಯಂ ಅಂಗೀಕರಿ ಸತ್ಯದೆಡೆಗೆ ಇತರರನ್ನು ಆಹ್ವಾನಿಸಲಾರಂಭಿಸಿದೆ. ಅದೇ ಅವಶ್ಯಕತೆಗಾಗಿಯೇ ತರ್ಜುಮಾನು ಕುರ್‌ಆನನ್ನು ನಡೆಸಿದೆ."

ತರುವಾಯ ಅವರು ಈಗಾಗಲೇ ಅಸ್ತಿತ್ವದಲ್ಲಿರುವ ಮುಸ್ಲಿಮ್ ಸಂಘಟನೆ ಮತ್ತು ರೂಪೀಕರಿಸಲಿರುವ ಜಮಾಅತ್‌ನ ಪರಸ್ಪರ ವ್ಯತ್ಯಾಸಗಳನ್ನು ವಿವರಿಸಿದರು. ಅ ವೇಳೆ ಈಗ ರೂಪಿಸಲಿರುವ ಜಮಾಅತ್‌ಗೆ ಪ್ರವಾದಿವರ್ಯರ(ಸ) ನಾಯಕತ್ವದ ರೂಪಿಸಿದ್ದ ಜಮಾಅತ್‌ನ ಸ್ಥಾನವಿರುವುದಿಲ್ಲವೆಂದೂ ಸ್ಪಷ್ಟ ಪಡಿಸುತ್ತಾ ಹೀಗೆ ಹೇಳಿದ "ನಾವು ರಚಿಸಲಿರುವ ಸಂಘಟನೆಗೆ ಪ್ರವಾದಿ(ಸ) ಮತ್ತು ಅನುಯಾಯಿಗಳು ಸ್ಥಾಪಿಸಿದ 'ಅ ಜಮಾಅತ್'ನ ಸ್ಥಾನವಿರುವುದಿಲ್ಲ. ಇದು ಕೇವಲ ಇಸ್ಲಾಮಿನ ನವೋತ್ಥಾನಕ್ಕಾಗಿ ಸ್ಥಾಪಿಸಲ ಸಂಘಟನೆಯಾಗಿದೆ. ಇದರಲ್ಲಿ ಸೇರದೆ ಹೊರಗಿರಲು ಮುಸ್ಲಿಮರಿಗೆ ಹಕ್ಕಿದೆ. ಆ ಪ್ರವಾದಿಯವರು ರಚಿಸಿದ ಜಮಾಅತ್‌ನಲ್ಲಿ ಸೇರದವರು ಮುಸ್ಲಿಮ್ ಆಗುತ್ತಿರಲಿಲ್ಲ.

ಆ ಬಳಿಕ ಸೈಯದ್ ಮೌದೂದಿಯವರು ಕೆಲವು ಅಪಾಯಗಳತ್ತ ಸಭೆಯ ಗವ ಸೆಳೆದರು: "ಶೀಘ್ರದಲ್ಲಿಯೇ ಕೆಲವರು ಈ ಸಂಘಟನೆಯನ್ನು ಮುಸ್ಲಿಮರಲ್ಲಿರುವ ಒಂ ಪ್ರತ್ಯೇಕ ಪಂಥವೆಂದು ಪರಿಗಣಿಸುವರು. ಆಗ ಜಮಾಅತ್‌ನ ಗಮನವು ನೈಜ ಕರ್ತ ನಿರ್ವಹಣೆಯ ಬದಲಾಗಿ ಇತರ ಮುಸ್ಲಿಮರೊಂದಿಗೆ ಸ್ಪರ್ಧೆ ಮತ್ತು ವಿವಾದದ ತಿರುಗಬಹುದು. ನಾವು ರಚಿಸಲಿರುವಂತಹ ಸಂಘಟನೆಗಳ ನಾಯಕರ ಬಗ್ಗೆ ಅನುಯಾ ಗಳಲ್ಲಿ ಗಂಭೀರ ತಪ್ಪು ತಿಳುವಳಿಕೆಗಳಿರುತ್ತವೆ. ನಮ್ಮ ನಾಯಕರಿಗೂ ಪ್ರವಾದಿ(ಸ) ಹಾ ಅನಂತರದ ಸಚ್ಚರಿತ ಖಲೀಫರ ಸ್ಥಾನವಿದೆಯೆಂದು ಅವರು ಭಾವಿಸುತ್ತಾರೆ. ಆದ್ದರಿಂದ ಅ ಅನುಸರಣೆಯ ಪ್ರಮಾಣ ವಚನ (ಬೈಅತ್) ಮಾಡದವರನ್ನು ಇಸ್ಲಾಮಿನಿಂದ ಹ ಹೋದವರೆಂದು ಭಾವಿಸುತ್ತಾರೆ. ಅನಂತರ ಅವರ ಎಲ್ಲ ಚಟುವಟಿಕೆಗಳೂ ತಮ್ಮ ನಾಯ ನಾಯಕತ್ವ(ಇಮಾಮತ್)ವನ್ನು ಅನ್ಯರಿಂದ ಅಂಗೀಕರಿಸುವಂತೆ ಮಾಡುವುದಾಗಿರುತ್ತದೆ.

ಸುದೀರ್ಘವಾದ ಪ್ರಾಸ್ತಾವಿಕ ಭಾಷಣವನ್ನು ಕೊನೆಗೊಳಿಸುತ್ತಾ ಸೈಯದ್ ಮೌದೂ ಹೇಳಿದರು: "ಇಸ್ಲಾಮೇತರ ವ್ಯವಸ್ಥೆಯಲ್ಲಿ ಅಧ್ಯಕ್ಷ ಅಥವಾ ಪ್ರಧಾನಿಯಾಗಿರುವುದಕ್ಕಿ ಇಸ್ಲಾಮಿ ಸಂಘಟನೆಯ ಅಧೀನದಲ್ಲಿ ಚಪ್ರಾಸಿ (ಝಾಡ ಮಾಲಿ) ಯಾಗಿರುವುದನ್ನು ನಾ ಮೆಚ್ಚುತ್ತೇನೆ. ಜಮಾಅತನ್ನು ರಚಿಸುವುದಕ್ಕಿಂತ ಮುಂಚೆ ಎಲ್ಲ ಕೆಲಸ ಕಾರ್ಯ ಹೊಣೆಯನ್ನು ನಾನೇ ವಹಿಸಿಕೊಂಡಿರುವಂತೆಯೇ ಇನ್ನು ಮುಂದೆಯೂ ನಾನೇ ಅದ ನಾಯಕತ್ವವನ್ನು ವಹಿಸುವೆನೆಂದು ಭಾವಿಸಬಾರದು. ಜಮಾಅತ್‌ನ ರಚನೆಯಿಂದ ನ ಈವರೆಗಿನ ಸ್ಥಿತಿ ಕೊನೆಗೊಳ್ಳುತ್ತದೆ. ಭಾವೀ ಚಟುವಟಿಕೆಯೆಲ್ಲವೂ ಜಮಾಅತ್‌ನ

ಪ್ತವಾಗಿರುವುದು. ಜಮಾಅತ್‌ನ ನಾಯಕತ್ವವನ್ನು ಯಾರಿಗೆ ವಹಿಸಿಕೊಟ್ಟರೂ ಅವರನ್ನು ಸರಿಸಿ ಅವರಿಗೆ ಸಹಕಾರ ನೀಡಿ ಶುಭಾಕಾಂಕ್ಷಿಯಾಗಿರಲು ಇತರರಂತೆಯೇ ನಾನೂ ನಾಗಿದ್ದೇನೆ.

ಪ್ರಾಸ್ತಾವಿಕ ಭಾಷಣದ ಬಳಿಕ ಮೊದಲೇ ವಿವರಿಸಲಾಗಿದ್ದ ಸಂವಿಧಾನದ ವಿವರವಾಗಿ ಚರ್ಚಿಸಿ, ಕೆಲವಾರು ತಿದ್ದುಪಡಿಗಳೊಂದಿಗೆ ಸರ್ವಾನುಮತದಿಂದ ೀಕರಿಸಲಾಯಿತು. ತರುವಾಯ ಮೌಲಾನಾ ಮೌದೂದಿಯವರು ಶಹಾದತ್ (ಸಾಕ್ಷ್ಯ) ನವನ್ನು ಪುನರುಚ್ಚರಿಸಿ ಜಮಾಅತೆ ಇಸ್ಲಾಮಿಯ ಸದಸ್ಯರಾದರು. ಆ ಬಳಿಕ ಇತರರೂ ನ್ನು ಪುನರಾವರ್ತಿಸಿದರು. ಹೀಗೆ ಭಾರತ ಉಪ ಭೂ ಖಂಡದ ಇಸ್ಲಾಮಿ ಸುಧಾರಣಾ ದೋಲನವಾಗಿರುವ ಜಮಾಅತೆ ಇಸ್ಲಾಮಿ ಸ್ಥಾಪನೆಯಾಯಿತು. ಪ್ರಸ್ತುತ ರಚನಾ ಯಲ್ಲಿ 75 ಮಂದಿ ಭಾಗವಹಿಸಿದ್ದರು.

ಸಂಘಟನೆಯು ರಚನೆಯಾದ ಕೂಡಲೇ ಸೈಯದ್ ಮೌದೂದಿಯವರು ಇಸ್ಲಾಮಿ ಮಾಅತ್‌ನ ಸ್ವರೂಪ ಮತ್ತು ಧ್ಯೇಯೋದ್ದೇಶಗಳನ್ನು ವಿವರಿಸುತ್ತಾ ಹೀಗೆ ಹೇಳಿದರು: ಂದೇ ತತ್ವ ಸಿದ್ಧಾಂತ, ಒಂದೇ ಧ್ಯೇಯ ಮತ್ತು ಒಂದೇ ಕಾರ್ಯ ವಿಧಾನವನ್ನು ಂದಿರುವ ಜನರು ಸಂಘಟಿತರಾಗದೆ ನಿರ್ವಾಹವಿಲ್ಲ. ಅಂಥ ಜನರು ಜತೆಗೂಡಿ ಘಟನೆಯಾಗುವುದು ಸಹಜ. ಐಕ್ಯ ಮತ್ತು ಸಂಘಟನೆಯು ತಾತ್ವಿಕ ಸಂಯೋಜನೆಯ ವಾರ್ಯ ಪರಿಣಾಮವಾಗಿದೆ. ವಿಭಿನ್ನ ಧ್ವನಿಯಿರುವಲ್ಲಿ ಮಾತ್ರ ಅನೈಕ್ಯವುಂಟಾಗುತ್ತದೆ. ದ್ಧಾಂತಿಕ ಐಕ್ಯವಿರುವಲ್ಲಿಯೂ ಸ್ವಾರ್ಥದಿಂದಾಗಿ ಅನೈಕ್ಯವುಂಟಾಗಬಹುದು. ಏಕೆಂದರೆ ರ್ಥವೇ ಒಂದು ಧ್ವನಿಯಾಗಿದೆ. ಅದರ ಮೇಲೆ ವಿಶ್ವಾಸವಿರಿಸುವವರು ಇತರೆಲ್ಲ ಷಯಗಳಲ್ಲಿ ಸಹಮತವಿದ್ದರೂ ಸ್ವಂತ ಹಾದಿಯಲ್ಲಿಯೇ ಮುಂದೆ ಸಾಗುತ್ತಾರೆ."

"ನಿಮ್ಮ ತತ್ವ ಸಿದ್ಧಾಂತ, ಧ್ಯೇಯ ಮತ್ತು ಮಾರ್ಗವು ಒಂದೇ ಎಂದು ನೀವೆಲ್ಲರೂ ಕ್ಷ್ಯ ವಹಿಸಿದ್ದೀರಿ. ಆ ಮೂಲಕ ನಿಮ್ಮೆಲ್ಲರ ಧ್ವನಿಯೂ ಒಂದೇ ಎಂದು ನೀವು ಪ್ಪಿದ್ದೀರಿ. ಆದ್ದರಿಂದ ನೀವೊಂದು ಸಂಘಟನೆಯಾಗಿದ್ದೀರಿ. ಇನ್ನು ನನ್ನಲ್ಲಿಯೂ ಮ್ಮಲ್ಲಿಯೂ ಸತ್ಯದ ಹಾದಿಯಿಂದ ದೂರ ಸರಿಸುವಂತಹ ಸ್ವಾರ್ಥ ಬೆಳೆಯದಿರಲೆಂದು ನು ಅಲ್ಲಾಹನಲ್ಲಿ ಪ್ರಾರ್ಥಿಸುತ್ತೇನೆ. ನಮ್ಮ ಸಂಘಟಿತ ಜೀವನ ಇಲ್ಲಿಂದ ರಂಭವಾಗುತ್ತದೆ."

ತರುವಾಯ ಮೌಲಾನಾರು ಸಂಘಟನಾ ವ್ಯವಸ್ಥೆಯ 5 ನಿಯಮಗಳನ್ನು ವಿವರಿಸಿದರು:

(1) ಜಮಾಅತ್‌ನ ಪ್ರತಿಯೋರ್ವ ಸದಸ್ಯನೂ ಸಂಘಟನೆ ಮತ್ತು ಅದರ ಎಲ್ಲ ನರ ಹಿತಚಿಂತಕನಾಗಿರಬೇಕು.

(2) ನನ್ನ ಪಕ್ಷ ಸತ್ಯದಲ್ಲಿದ್ದರೂ ಅಸತ್ಯದಲ್ಲಿದ್ದರೂ ನಾನು ಅದರ ಜತೆಗಿರುತ್ತೇನೆ ಇತರ ಸಂಘಟನೆಗಳ ಧೋರಣೆ ಜಮಾಅತ್‌ಗೆ ಅಂಗೀಕಾರಾರ್ಹವಲ್ಲ. ಅದರ ಸದ ಪರಸ್ಪರ ಸಂಬಂಧಕ್ಕೆ ಅಲ್ಲಾಹನೊಂದಿಗಿನ ವಿಶ್ವಾಸವೇ ಹೇತುವಾಗಿದೆ. ಆದ್ದರಿಂದ ಸ ವಿರಸ, ಪ್ರೀತಿ, ದ್ವೇಷವೆಲ್ಲವೂ ಅಲ್ಲಾಹನಿಗಾಗಿರಬೇಕು. ಅಲ್ಲಾಹನ ಅನುಸರಣೆ ಮ ಆದೇಶಗಳನ್ನು ಪಾಲಿಸುವ ಕಾರ್ಯದಲ್ಲಿ ಪರಸ್ಪರ ಸಹಕರಿಸಬೇಕು. ಆತನನ್ನು ಧಿಕ್ಕರಿ ಅಥವಾ ಆತನ ಕಾನೂನು ಉಲ್ಲಂಘಿಸುವ ಕಾರ್ಯಗಳಲ್ಲಿ ಸಹಕರಿಸಬಾರದು.

(3) ಜಮಾಅತ್‌ನಲ್ಲಿ ಗುಂಪುಗಾರಿಕೆಯಿರಬಾರದು. ಸಂಘಟನೆಯೊಳಗೆ ಪಕ್ಷ ಕಟ್ಟ ಪ್ರಯತ್ನಿಸಬಾರದು. ಒಳಸಂಚು, ಗುಂಪುಗಾರಿಕೆ, ಪಕ್ಷಪಾತ, ಪರನಿಂದೆ, ತಪ್ಪು ತಿಳುವ ಇತ್ಯಾದಿ ವಿಷಯಗಳು ಇಸ್ಲಾಮಿ ಸಂಘಟನೆಗೆ ತಕ್ಕುದಲ್ಲ. ಕಾರ್ಯಕರ್ತರೆಲ್ಲರೂ ಇ ಕೆಡುಕುಗಳಿಂದ ಸಂಪೂರ್ಣ ಮುಕ್ತರಾಗಿರಬೇಕು.

(4) ಪರಸ್ಪರ ಸಮಾಲೋಚನೆಯು ಇಸ್ಲಾಮಿ ಸಂಘಟನೆಯ ಮೂಲ ಸ್ವಭಾವವಾ

(5) ಸಮಾಲೋಚನೆಯ ವೇಳೆ ಸ್ವಂತ ಅಭಿಪ್ರಾಯಕ್ಕಾಗಿ ಹಠ ಹಿಡಿಯಬಾರ ತೀರ್ಮಾನ ಕೈಗೊಂಡ ಬಳಿಕ ಭಿನ್ನಮತವಿರುವ ವಿಷಯದಲ್ಲಿಯೂ ಸಂಪೂರ್ಣ ಸಹಕರಿಸಬೇ ಸಮಾಲೋಚನೆಯ ಬಳಿಕ ಕೈಗೊಳ್ಳುವ ತೀರ್ಮಾನಗಳನ್ನು ಅಂಗೀಕರಿಸದಿರುವು ಅನಿಸ್ಲಾಮಿಕವಾಗಿದೆ.

1941 ಅಗಸ್ಟ್ 27ರಂದು ಜಮಾಅತೆ ಇಸ್ಲಾಮಿಯ ಪ್ರಥಮ ಅಧ್ಯಕ್ಷರಾಗಿ ಸಯ್ಯ ಅಬುಲ್ ಆಲಾ ಮೌದೂದಿ ಚುನಾಯಿತರಾದರು. ಅನಂತರ ಅವರು ಮಾಡಿದ ಭಾಷಣದ ಹೀಗೆ ಹೇಳಿದರು: "ನನ್ನ ಮಟ್ಟಿಗೆ ಈ ಆಂದೋಲನವು ನನ್ನ ಜೀವನದ ಧ್ಯೇಯವಾಗಿ ನಾನು ಬದುಕುವುದೂ ಸಾಯುವುದೂ ಅದಕ್ಕಾಗಿಯೇ. ಯಾರೂ ಮುಂದೆ ಬಾರದಿದ್ ನಾನೊಬ್ಬನೇ ಸಾಗುತ್ತೇನೆ. ಇಡೀ ಜಗತ್ತು ಒಗ್ಗಟ್ಟಿನಿಂದ ವಿರೋಧಿಸಿದರೂ ನಾ ಏಕಾಂಗಿಯಾಗಿ ಹೋರಾಡುತ್ತೇನೆ."

"ಫಿಕ್ಹ್ ಮತ್ತು ಇಲ್ಮುಲ್ ಕಲಾಮ್‌ನ ಬಗ್ಗೆ ನಾನು ಸ್ವಂತ ಧೋರಣೆಯ ಹೊಂದಿದ್ದೇನೆ. ಅಧ್ಯಯನ ಸಂಶೋಧನೆಗಳಿಂದ ನಾನು ಅದನ್ನು ಅಂಗೀಕರಿಸಿದ್ದೇ ಅಧ್ಯಕ್ಷನಾಗಿರುವುದರಿಂದ ಒಂದು ವಿಷಯವನ್ನು ಸ್ಪಷ್ಟಪಡಿಸಬೇಕಾಗಿದೆ. ಫಿಕ್ಹ್ ಮ ಕಲಾಮ್‌ನಲ್ಲಿ ನಾನು ಹಿಂದೆ ಬರೆದಿರುವ ಹಾಗೂ ಇನ್ನು ಬರೆಯುವ ಮತ್ತು ಹೇಳ ವಿಷಯಗಳು ಅಧ್ಯಕ್ಷನೆಂಬ ನೆಲೆಯಲ್ಲಿರುವ ನಿರ್ಣಯವಾಗಿರಲಾರವು. ಅದು ಕೇವಲ ನ ವೈಯಕ್ತಿಕ ಅಭಿಪ್ರಾಯಗಳಾಗಿರುವುವು. ನನ್ನ ಈ ಅಭಿಪ್ರಾಯಗಳನ್ನು ನಾನು ಜಮಾಅತ ವಿದ್ವಾಂಸರ ಮೇಲೆ ಹೇರ ಬಯಸುವುದಿಲ್ಲ. ಹಾಗೆಯೇ ನನ್ನ ಸಂಶೋಧನಾತ್ಮಕ ಅಧ್ಯಯ

ುತ್ತು ಅಭಿಪ್ರಾಯ ಸ್ವಾತಂತ್ರ್ಯದ ಮೇಲೆ ಜಮಾಅತ್‌ನ ಕಾರ್ಯಕರ್ತರೊಡನೆ ನಾನು ಲ್ಲಾಹನ ಹೆಸರಲ್ಲಿ ವಿನಂತಿಸುವುದೇನೆಂದರೆ, ಫಿಕ್ಹ್ ಮತ್ತು ಇಲ್ಮುಲ್ ಕಲಾಮ್‌ನ ಬಗೆಗಿನ ನ್ನ ಅಭಿಪ್ರಾಯಗಳನ್ನು ನೀವು ಇತರರ ಮುಂದೆ ಆಧಾರವಾಗಿ ಸಮರ್ಪಿಸಬಾರದು. ಂತೆಯೇ ನನ್ನ ಅಧ್ಯಯನಗಳ ಆಧಾರದಲ್ಲಿ ನಾನು ಮಾಡುವ ವೈಯಕ್ತಿಕ ಚಟುವಟಿಕೆಗಳನ್ನು ತರರಿಗೆ ಆಧಾರವಾಗಿ ಮಾಡಬಾರದು. ಅಂಥ ಚಟುವಟಿಕೆಗಳನ್ನು ಕೇವಲ ನಾನು ಾಡಿರುವೆನೆಂಬ ಕಾರಣಕ್ಕಾಗಿ ಅನುಕರಿಸಬಾರದು. ಧರ್ಮದ ತಿಳುವಳಿಕೆಯಿಲ್ಲದ ಜನರು ವರಿಗೆ ನಂಬಿಕೆಯಿರುವವರ ತಿಳುವಳಿಕೆಯ ಆಧಾರದಲ್ಲಿ ಕಾರ್ಯ ನಿರ್ವಹಿಸಲಿ. ಇಂಥ ಷಯಗಳಲ್ಲಿ ನನ್ನೊಂದಿಗೆ ಸಹಮತ ಅಥವಾ ಭಿನ್ನಮತವಿರಿಸುವ ಸಂಪೂರ್ಣ ಸ್ವಾತಂತ್ರ್ಯ ಮಗಿದೆ. ಆಂಶಿಕ ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯವಿರುತ್ತಾ ಪರಸ್ಪರ ಚರ್ಚೆ ಸಂವಾದ ಡೆಸಿ ಒಂದೇ ಜಮಾಅತ್‌ನಲ್ಲಿ ಮುಂದುವರಿಯಲು ಸಾಧ್ಯವಿದೆ. ಪ್ರಮುಖ ಸಹಾಬಿಗಳು ಾಗೇ ಮಾಡಿದ್ದರು."

ಸ್ಥಾಪನೆಯ ಸಭೆಯಲ್ಲಿ ಭಾಗವಹಿಸಿದವರೆಲ್ಲರೂ ಅಧ್ಯಕ್ಷರೊಂದಿಗೆ ಬೈಅತ್ ಾಡಿದರು. ಆ ಬಳಿಕ ಶೂರಾ (ಸಲಹಾ ಮಂಡಳಿ) ಸದಸ್ಯರ ಚುನಾವಣೆ ನಡೆಯಿತು. ್ರಥಮ ಶೂರಾದಲ್ಲಿ 7 ಸದಸ್ಯರಿದ್ದರು. ಆ ಮೂಲಕ ಜಮಾಅತೆ ಇಸ್ಲಾಮಿಯು ಪೂರ್ಣ ್ಯವಸ್ಥೆಯೊಂದಿಗೆ ಅಸ್ತಿತ್ವಕ್ಕೆ ಬಂತು.



# VII

# ಇಸ್ಲಾಮಿ ವಿಶ್ವಾಸದ ಮೂಲ

'ಲಾ ಇಲಾಹ ಇಲ್ಲಲ್ಲಾಹ್, ಮುಹಮ್ಮದುರ್ರಸೂಲುಲ್ಲಾಹ್' - ಇದು ಜಮಾಅ
ಇಸ್ಲಾಮಿಯ ಮೂಲ ವಿಶ್ವಾಸವಾಗಿದೆ. ಎಲ್ಲ ಮುಸ್ಲಿಮರ ಘೋಷಿತ ವಿಶ್ವಾಸವೂ ಅದ
ಆಗಿದೆ. ಅದು ಜಗತ್ತಿನಲ್ಲಿ ನೇಮಕಗೊಂಡ ಎಲ್ಲ ಪ್ರವಾದಿಗಳಿಗೆ ದೊರೆತ ಬೋಧನೆಯಾಗಿತ್ತು
ಪ್ರವಾದಿಯವರನ್ನು(ಸ) ಅಭಿಸಂಬೋಧಿಸಿ ಅಲ್ಲಾಹ್ ಹೇಳಿರುತ್ತಾನೆ: "ನಾನಲ್ಲದೆ ಅ
ಆರಾಧ್ಯರಿಲ್ಲ. ಆದ್ದರಿಂದ ಕೇವಲ ನನ್ನನ್ನು ಆರಾಧಿಸಿರಿ ಎಂಬ ಬೋಧನೆ ನೀಡದೆ ಒ
**ಪ್ರವಾದಿಯನ್ನೂ ನಿಮಗಿಂತ ಮುಂಚೆ ನಾವು ನೇಮಿಸಿಲ್ಲ."** (ಪವಿತ್ರ ಕುರ್‌ಆನ್,21: 2

ಪ್ರವಾದಿಯವರು(ಸ) ಹೇಳಿದ್ದಾರೆ: ನಾನು ಮತ್ತು ನನ್ನ ಹಿಂದಿನ ಪ್ರವಾದಿಗಳ
ಹೇಳಿರುವ ವಾಕ್ಯದಲ್ಲಿ, 'ಲಾ ಇಲಾಹ ಇಲ್ಲಲ್ಲಾಹ್' ಎಂಬುದು ಅತಿ ಶ್ರೇಷ್ಠವಾಗಿದ
ಹಾಗಿದ್ದರೂ ಎಲ್ಲ ಪ್ರವಾದಿಗಳು ಅರಬಿ ಭಾಷೆಯಲ್ಲಿ ಇದೇ ವಾಕ್ಯವನ್ನು ಹೇಳಿದ್ದರೆಂದ
ಇದರ ಅರ್ಥವಲ್ಲ. ಭಾಷೆ ಭಿನ್ನವಾಗಿದ್ದರೂ ತಾತ್ಪರ್ಯ ಒಂದೇ ಆಗಿತ್ತು.

## ದೇವ ವ್ಯವಸ್ಥೆ

ಅಲ್ಲಾಹನು, ಪ್ರಪಂಚ ಮತ್ತು ಸಕಲ ವಸ್ತುಗಳ ಸೃಷ್ಟಿಕರ್ತ, ಸಂರಕ್ಷಕ, ಒಡೆಯ
ಮತ್ತು ನಿಯಂತ್ರಕನಾಗಿದ್ದಾನೆ. ಅಖಿಲ ಪ್ರಪಂಚವು ಆತನ ವ್ಯವಸ್ಥೆಗೆ ಬದ್ಧವಾಗಿದ
ಸೂರ್ಯ, ಚಂದ್ರ, ನಕ್ಷತ್ರಾದಿಗಳೂ ಆತನ ನಿಯಮಕ್ಕೆ ಅಧೀನವಾಗಿವೆ. ಗಾಳಿ, ಮ
ಗುಡುಗು, ಮಿಂಚುಗಳು, ಪ್ರಾಣಿ-ಪಕ್ಷಿ ಇತ್ಯಾದಿ ಸಕಲ ಜೀವ ಜಾಲಗಳೂ ಆತನ
ವಿಧೇಯವಾಗಿವೆ.

ಆದರೆ ಮಾನವನಿಗೆ ಎರಡು ಸ್ಥಿತಿಗಳಿವೆ. ಅನಿವಾರ್ಯವಾಗಿ ದೇವ ನಿಯಮಗಳಿ
ಬದ್ಧವಾಗಿರಬೇಕಾದ ಒಂದು ಸ್ಥಿತಿ. ಮಾನವನು ಭೂಮಿಗೆ ತಾಯಿಯ ಗರ್ಭದಿಂ
ಬಂದಿದ್ದಾನೆ. ಆದರೆ ಮಾನವ ರೂಪ ಪಡೆಯುವುದಕ್ಕಿಂತ ಮುಂಚೆ ಆತ ಎಲ್ಲಿದ್ದ? 10
150 ವರ್ಷಗಳ ಹಿಂದೆ ನಾವು ಯಾವ ಸ್ಥಿತಿಯಲ್ಲಿದ್ದೆವು. ಯಾರಿಗೂ ತಿಳಿದಿಲ್ಲ. ಅಲ್ಲಾಹ
ಕೇಳುತ್ತಾನೆ:

**"ಮಾನವನು ಪ್ರಸ್ತಾಪನೀಯ ವಸ್ತುವೇ ಆಗಿರದಂತಹ ಒಂದು ಸುದೀರ್ಘ ಕಾಲ
ಆತನ ಹಿಂದೆ ಗತಿಸಿಲ್ಲವೇ?"** (ಪವಿತ್ರ ಕುರ್‌ಆನ್,76:1

ಅಜ್ಞಾನ ಸ್ಥಿತಿಯಲ್ಲಿ ಪುರುಷ ಬೀಜವೂ ಸ್ತ್ರೀ ಅಂಡಾಣುವೂ ಸೇರಿ ಮಾನವನ

ಯಿಯ ಗರ್ಭಾಶಯದಲ್ಲಿ ರೂಪು ತಾಳುತ್ತಾನೆ. ತಮ್ಮ ಇಚ್ಛೆ ಅಥವಾ ಆಶೆ ಅಭಿಲಾಷೆಗಳ ಕಾರ ಯಾರೂ ಸೃಷ್ಟಿಸಲ್ಪಡುವುದಿಲ್ಲ. ಊರು, ಮನೆ, ದೇಶ, ಕಾಲ, ಕುಲ, ಕುಟುಂಬ ತ್ಯಾದಿಗಳ ನಿರ್ಣಯದಲ್ಲಿಯೂ ಮಾನವನ ಪಾತ್ರವಿಲ್ಲ. ನಾನು ಉದ್ದ-ಗಿಡ್ಡ, ಬಿಳಿ-ಕಪ್ಪು, ನ್ನಡಿಗ-ಮಲೆಯಾಳಿ, ಗಂಡು-ಹೆಣ್ಣು, ಬುದ್ಧಿವಂತ-ತಿಳಿಗೇಡಿ ಇತ್ಯಾದಿ ಆಗಬೇಕೆಂದು ರ್ಣಯಿಸಲೂ ಯಾರಿಗೂ ಸಾಧ್ಯವಿಲ್ಲ. ಎಲ್ಲವೂ ದೇವ ನಿರ್ಮಿತ ಮತ್ತು ಅನುಲ್ಲಂಘನೀಯ.

"ನಿಮ್ಮ ಮಾತೆಯರ ಗರ್ಭಗಳಲ್ಲಿ ತನಗಿಷ್ಟ ಬಂದ ರೂಪವನ್ನು ನಿಮಗೆ ಡುವಾತನು ಅವನೇ. ಪ್ರಬಲನೂ ಯುಕ್ತಿ ಪೂರ್ಣನೂ ಆಗಿರುವ ಅವನ ಹೊರತು ನ್ಯ ಆರಾಧ್ಯರಿಲ್ಲ." (ಪವಿತ್ರ ಕುರ್‌ಆನ್,3: 6)

"ಆತನು ನಿಮ್ಮನ್ನು ಸೃಷ್ಟಿಸಿದನು ಮತ್ತು ನಿಮಗೆ ರೂಪ ನೀಡಿದನು."

(ಪವಿತ್ರ ಕುರ್‌ಆನ್,7: 11)

"ಓ ಮಾನವಾ! ಆ ನಿನ್ನ ಕರುಣಾಮಯಿ ಪ್ರಭುವಿನ ಬಗ್ಗೆ ನಿನ್ನನ್ನು ಮೋಸಕ್ಕೊಳ ಡಿಸಿದ ವಸ್ತು ಯಾವುದು? ಅವನು ನಿನ್ನನ್ನು ಸೃಷ್ಟಿಸಿದನು. ನಿನ್ನನ್ನು ನಖ ಶಿಖಾಂತ ) ಪಡಿಸಿದನು. ನಿನ್ನನ್ನು ಸಂತುಲಿತಗೊಳಿಸಿದನು. ತಾನಿಚ್ಛಿಸಿದ ರೂಪದಲ್ಲಿ ನಿನ್ನನ್ನು ೋಡಿಸಿದನು." (ಪವಿತ್ರ ಕುರ್‌ಆನ್,82: 6-7)

ಮಾನವನ ರೂಪಭಾವಗಳ ನಿರ್ಣಯದಲ್ಲಿ ಆತನಂತೆಯೇ ಆತನ ತಂದೆ ತಾಯಿಗಳ ತ್ರವೂ ಇಲ್ಲ. ಅವರು ಕೇವಲ ಮಾನವ ಜನ್ಮದ ಮಾಧ್ಯಮವಾಗಿದ್ದಾರೆ.-

"ನೀವು ಸುರಿಸುವ ವೀರ್ಯದ ಕುರಿತು ನೀವೆಂದಾದರೂ ವಿವೇಚಿಸಿರುವಿರಾ? ನರಿಂದ ಶಿಶುವನ್ನುಂಟು ಮಾಡುವವರು ನೀವೋ ಅಥವಾ ನಾವೋ?"

(ಪವಿತ್ರ ಕುರ್‌ಆನ್,56: 58-59)

"ಅಲ್ಲಾಹ್, ಭೂಮಿ-ಆಕಾಶಗಳ ಪ್ರಭುತ್ವದ ಒಡೆಯನು. ತಾನಿಚ್ಛಿಸಿದ್ದನ್ನು ಅವನು ಷ್ಟಿಸುತ್ತಾನೆ. ತಾನಿಚ್ಛಿಸಿದವರಿಗೆ ಹೆಣ್ಣು ಮಕ್ಕಳನ್ನು ಕೊಡುತ್ತಾನೆ. ತಾನಿಚ್ಛಿಸಿದವರಿಗೆ ಡು ಮಕ್ಕಳನ್ನು ಕೊಡುತ್ತಾನೆ. ತಾನಿಚ್ಛಿಸಿದವರಿಗೆ ಗಂಡು-ಹೆಣ್ಣುಗಳೆರಡನ್ನೂ ಸೇರಿಸಿ ಡುತ್ತಾನೆ. ತಾನಿಚ್ಛಿಸಿದವರನ್ನು ಬಂಜೆಯಾಗಿ ಮಾಡುತ್ತಾನೆ. ಅವನು ಸರ್ವಜ್ಞನೂ ಸರ್ವ ಮರ್ಥನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್,42: 49-50)

ಆದರೆ, ಜೀವನದ ಇತರ ಕೆಲವು ವಲಯಗಳಲ್ಲಿ ಮಾನವನಿಗೆ ಆಯ್ಕೆಯ ಅಧಿಕಾರ ತ್ತು ಸ್ವಾತಂತ್ರ್ಯ ನೀಡಲಾಗಿದೆ. ಇದು ಮಾನವನ ಎರಡನೆಯ ಸ್ಥಿತಿ. ನಾವು ಏನು ನ್ನಬೇಕು, ಏನು ತಿನ್ನಬಾರದು, ಏನು ಕುಡಿಯಬೇಕು, ಏನು ನೋಡಬೇಕು, ಏನು ೋಡಬಾರದು ಹೇಗೆ ಬಾಳಬೇಕು, ಹೇಗೆ ಬಾಳಬಾರದು ಇತ್ಯಾದಿಗಳನ್ನು ನಾವು ರ್ಧರಿಸಬಹುದಾಗಿದೆ. ಈ ವಿಷಯಗಳಲ್ಲಿ ಪಾಲಿಸಬೇಕಾದ ಕ್ರಮವನ್ನು

ನಿಯಮವೆನ್ನಲಾಗುತ್ತದೆ. ಆದ್ದರಿಂದ ಕೈಕಾಲು, ಕಣ್ಣು, ಕಿವಿ, ಮೂಗು, ಆಯು ಆರೋಗ್ಯ, ಜೀವನ ಇತ್ಯಾದಿಗಳನ್ನು ಬಳಸುವ ನಿಶ್ಚಿತ ಕ್ರಮವು ನಿಯಮವಾ ಹಾಗಾದರೆ ಇಂಥ ನಿಯಮವನ್ನು ರಚಿಸುವ ಪರಮಾಧಿಕಾರ ಯಾರಿಗಿದೆ? ಅಥವಾ ನ ಹೇಗೆ ಬಾಳಬೇಕು ಹೇಗೆ ಬಾಳಬಾರದೆಂದು ವಿಧಿ ನಿಷೇಧಗಳನ್ನು ಹೇರುವ ವಿಶೇಷ ಹ ಯಾರಿಗಿದೆ?

ನಮ್ಮ ಕೈಕಾಲುಗಳು ದುರ್ಬಲಗೊಂಡು ನಿಷ್ಕ್ರಿಯವಾಗುವುದನ್ನು ತಪ್ಪಿ ಸಾಧ್ಯವಿಲ್ಲದವರಿಗೆ ಅವುಗಳನ್ನು ಹೇಗೆ ಬಳಸಬೇಕೆಂದು ನಮಗೆ ಆದೇಶಿ ಪರಮಾಧಿಕಾರವಿಲ್ಲ. ನಾಲಗೆಯ ಚಲನೆ ಶಕ್ತಿ ನಿಂತಾಗ ಅದನ್ನು ಮರಳಿ ನೀ ಸಾಧ್ಯವಿಲ್ಲದವರು ಅದರಿಂದ ಏನು ಹೇಳಬೇಕು ಏನು ಹೇಳಬಾರದೆಂದು ಆದೇಶಿಸು ಅತಿಕ್ರಮವಾಗಿದೆ. ಆದ್ದರಿಂದ ನಮ್ಮ ದೇಹ, ಅಂಗಾಂಗಗಳು, ಜೀವ, ಜೀವನ ಹೇಗೆ ಉಪಯೋಗಿಸಬೇಕೆಂದು ನಿರ್ಣಯಿಸುವ ಪರಮಾಧಿಕಾರ ಯಾರಿಗೂ ಇಲ್ಲ ಅ ಮಾನವರಲ್ಲಿ ಯಾರಿಗೂ ಇತರರಿಗೆ ಕಾನೂನು ರಚಿಸುವ ಅಧಿಕಾರವಿಲ್ಲ.

ಹಾಗಾದರೆ, ಪ್ರತಿಯೊಬ್ಬ ಮಾನವನು ಹೇಗೆ ಜೀವಿಸಬೇಕೆಂದು ಸ್ವತಃ ನಿರ್ಧರಿಸಬಾ ವಸ್ತುಶಃ ಇದು ಸಾಧ್ಯವಲ್ಲ, ವ್ಯಾವಹಾರಿಕವಲ್ಲ. ಪ್ರತಿಯೊಬ್ಬರೂ ತಮಗೆ ತೋಚಿ ಬದುಕಿದರೆ ಮಾನವ ಕುಲದ ಅಸ್ತಿತ್ವವೇ ಅಸಾಧ್ಯವಾದೀತು. ಮಾತ್ರವಲ್ಲ, ಅದು ಅಕ್ಷ ಅಪರಾಧವೂ ಆಗಿದೆ. ಏಕೆಂದರೆ ಮಾನವನು ಬಳಸುವ ಯಾವುದರ ಮೇಲೆಯೂ ಆ ಸಂಪೂರ್ಣ ಅಧಿಕಾರವಿಲ್ಲ. ನಾವು ಸಾಮಾನ್ಯವಾಗಿ ನನ್ನ ಕೈ, ನನ್ನ ಕಾಲು, ನನ್ನ ಕ ಎಂದು ಮುಂತಾಗಿ ಹೇಳುತ್ತೇವೆ ನಿಜ. ಆದರೆ ಅದು ಕೇವಲ ಬಾಹ್ಯಾರ್ಥದಲ್ಲಿ ಸತ್ಯ ವ ವಾಸ್ತವಿಕವಾಗುತ್ತದೆ. ನಿಜಾರ್ಥದಲ್ಲಿ ಅವು ಯಾವುದೂ ನಮ್ಮದ್ದಲ್ಲ. ಹಾಗಿರುತ್ತಿ ಅವುಗಳಿಗೆ ನೋವು, ರೋಗ, ಮುಪ್ಪು, ಮರಣ ಬರುತ್ತಿರಲಿಲ್ಲ. ಯಾವಾಗಲೂ ನಮ್ಮಿಚ್ಛೆಯ ಸಂಪೂರ್ಣ ಆರೋಗ್ಯವನ್ನೇ ಹೊಂದಿರುತ್ತಿತ್ತು. ಆದರೆ ನಮ್ಮ ಅನುಮತಿ ಪಡೆಯ ಬಯಕೆಯನ್ನು ವಿಚಾರಿಸದೆ ಅವು ರೋಗಕ್ಕೆ ಬಲಿಯಾಗುತ್ತವೆ. ನಮ್ಮದ್ದಲ್ಲವೆಂಬುದೇ ಅ ಕಾರಣ. ನಾವು ನಿರ್ಮಿಸದವುಗಳ ಮೇಲೆ ನಮಗೆ ಸಂಪೂರ್ಣ ಹಕ್ಕು ಇರುವುದಿಲ್ಲ ಹಕ್ಕಿಲ್ಲದವುಗಳನ್ನು ತೋಚಿದಂತೆ ಬಳಸುವುದು ಅನ್ಯಾಯ ಮತ್ತು ಅಕ್ರಮವಾ ಆದ್ದರಿಂದ ಮಾನವನ ಮೇಲೆ ಕಾನೂನು ನಿರ್ಮಿಸುವ ಪರಮ ಹಕ್ಕು ಆತನ ಸೃಷ್ಟಿ ಮತ್ತು ಒಡೆಯನಾದ ಅಲ್ಲಾಹನಿಗೆ ಮಾತ್ರವಿರುವುದು.

"ಅವನದೇ ಸೃಷ್ಟಿ, ಅವನದೇ ಅಪ್ಪಣೆ." (ಪವಿತ್ರ ಕುರ್‌ಆನ್,7:

"ಆಜ್ಞಾಧಿಕಾರವು ಅಲ್ಲಾಹನಿಗೆ ಹೊರತು ಇನ್ನಾರಿಗೂ ಇಲ್ಲ. ಅವನ ಹೊ ನೀವು ಯಾರ ದಾಸ್ಯ-ಆರಾಧನೆಯನ್ನೂ ಮಾಡಬಾರದೆಂದು ಅವನ ಕಟ್ಟಪ್ಪಣೆ ಇದೆ.

(ಪವಿತ್ರ ಕುರ್‌ಆನ್,12:

"ನೀವು ಅಲ್ಲಾಹನಿಂದ ಅವತೀರ್ಣಗೊಂಡ ಕಾನೂನಿನ ಪ್ರಕಾರ ಜನರ ಹಾರಗಳನ್ನು ತೀರ್ಮಾನಿಸಿರಿ. ಮತ್ತು ನೀವು ನಿಮ್ಮ ಬಳಿಗೆ ಬಂದಿರುವ ಸತ್ಯದಿಂದ ಖರಾಗಿ ಅವರ ಇಚ್ಛೆಗಳನ್ನು ಅನುಸರಿಸಬೇಡಿರಿ." (ಪವಿತ್ರ ಕುರ್‌ಆನ್,5: 49)

"ಅಲ್ಲಾಹನಲ್ಲಿ ದೃಢ ವಿಶ್ವಾಸವಿರಿಸುವ ಜನರ ದೃಷ್ಟಿಯಲ್ಲಿ ಅಲ್ಲಾಹನಿಗಿಂತ ತ್ತಮ ತೀರ್ಪು ನೀಡುವವರು ಯಾರಿದ್ದಾರೆ?" (ಪವಿತ್ರ ಕುರ್‌ಆನ್,5: 50)

## ಇಲಾಹ್ ಏತಕ್ಕಾಗಿ?

ಕೇವಲ ಅಲ್ಲಾಹನಿಗೆ ವಿಧೇಯರಾಗಿ, ಶರಣಾಗಿ ಬಾಳಬೇಕು. ಇತರರ ದಾಸ್ಯ-ಧನೆಯನ್ನು ಮಾಡಬಾರದು. ಮಿತಿ ಮೀರಿದ ಎಲ್ಲರನ್ನೂ ತಿರಸ್ಕರಿಸಬೇಕು. ಇದು ಲ್ಲಾಹನು ಮಾನವ ಕುಲಕ್ಕೆ ಪ್ರವಾದಿಗಳ ಮೂಲಕ ನೀಡಿದ ಆಜ್ಞೆ. "ನಾವು ಪ್ರತಿಯೊಂದು ಮುದಾಯಕ್ಕೂ ಓರ್ವ ಸಂದೇಶವಾಹಕನನ್ನು ಕಳುಹಿಸಿದೆವು. ಮತ್ತು 'ಅಲ್ಲಾಹನ ಾದತ್ (ದಾಸ್ಯ-ಆರಾಧನೆ) ಮಾಡಿರಿ ಮತ್ತು 'ತಾಗೂತ್'ನ ಇಬಾದತ್‌ನಿಂದ ದೂರವಿರಿ.' ನು ಅವರ ಮುಖಾಂತರ ಎಚ್ಚರಿಕೆ ನೀಡಿದೆವು." (ಪವಿತ್ರ ಕುರ್‌ಆನ್,16: 36)

ಹೀಗೆ ಅಲ್ಲಾಹನಿಗೆ ಶರಣಾಗಿ ಬಾಳುವುದೇ ಮಾನವ ಸಮಾಜದ ಕರ್ತವ್ಯವಾಗಿದೆ. ನ್‌ಗಳಂತೆಯೇ ಅವರನ್ನು ಅದೇ ಉದ್ದೇಶಕ್ಕಾಗಿ ಸೃಷ್ಟಿಸಲಾಗಿದೆ. "ನಾವು ಜಿನ್ನ್ ಮತ್ತು ನವ ಸಮುದಾಯವನ್ನು ನನ್ನ ಆರಾಧನೆಗಾಗಿಯಲ್ಲದೇ ಸೃಷ್ಟಿಸಿಲ್ಲ."

(ಪವಿತ್ರ ಕುರ್‌ಆನ್,51: 56)

ಈ ತತ್ವವನ್ನು 'ಲಾ ಇಲಾಹ ಇಲ್ಲಲ್ಲಾಹ್' ಎಂಬ ಪವಿತ್ರ ವಾಕ್ಯವು ನಿಧೀಕರಿಸುತ್ತದೆ. ಆ ಪ್ರಕಾರ ಮಾನವನು ಕೇವಲ ಅಲ್ಲಾಹನಿಗೆ ವಿಧೇಯವಾಗಿ ಿದಾಗ ಜೀವನವು ಪ್ರಪಂಚ ವ್ಯವಸ್ಥೆಯೊಡನೆ ಸರಿ ಹೊಂದುತ್ತದೆ. ನಿಸರ್ಗ ನಿಯಮಗಳಿಗೆ ಂದಿಕೊಳ್ಳುತ್ತದೆ. ಇಲ್ಲದಿದ್ದರೆ ವಿರೋಧಾಭಾಸ ತಲೆದೋರುತ್ತದೆ.

"ಇವರೇನು ಅಲ್ಲಾಹನ ಅನುಸರಣಾ ಧರ್ಮ ರೀತಿಯನ್ನು ತ್ಯಜಿಸಿ ಬೇರೆ ವುದಾದರೂ ರೀತಿಯನ್ನು ಅನುಸರಿಸಲು ಇಷ್ಟಪಡುತ್ತಾರೆಯೇ. ವಸ್ತುಶಃ ಆಕಾಶಗಳ ತ್ತು ಭೂಮಿಯ ಸಕಲ ವಸ್ತುಗಳೂ ಬಯಸಿಯೋ ಬಯಸದೆಯೋ ಅಲ್ಲಾಹನ ಜ್ಞಾಪಾಲಕಗಳಾಗಿ (ಮುಸ್ಲಿಮ್‌ಗಳಾಗಿಯೇ) ಇವೆ." (ಪವಿತ್ರ ಕುರ್‌ಆನ್,3: 83)

ಯಾವುದಾದರೊಂದನ್ನು ದೇವರೆಂದು ಅಂಗೀಕರಿಸಿ ಜೀವನವನ್ನು ಅದಕ್ಕೆ ರ್ಪಿಸಿದವರು ಜಗತ್ತಿನಲ್ಲಿ ಯಾರೂ ಇರಲಾರರು. ನೈಜ ದೇವರನ್ನು ನಿರಾಕರಿಸುವವರು ಕ ದೇವರುಗಳನ್ನು ಪ್ರತಿಷ್ಠಾಪಿಸಿ ಅವುಗಳಿಗೆ ಸರ್ವಸ್ವವನ್ನೂ ಸಮರ್ಪಿಸುವವರಾಗಿರುತ್ತಾರೆ. ರ್ನು ತನ್ನ ಜೀವನದಲ್ಲಿ ಯಾವುದನ್ನು ಪರಮ ಪ್ರಧಾನವೆಂದು ಪರಿಗಣಿಸುವನೋ

ಅದೇ ಆತನ ದೇವರಾಗಿರುವುದು. ತನ್ನ ಪರಮ ಪ್ರೀತಿ, ಗೌರವ, ಆರಾಧನೆ, ಅನುಸರಣೆ
ಯಾವುದಕ್ಕೆ ಅರ್ಪಿಸುವನೋ ಅದು ನಡೆ-ನುಡಿ-ಕ್ರಿಯೆ-ವರ್ತನೆಗಳ ನಿಯಾಮಕ
ಯಾವುದಕ್ಕಾಗಿ ಮಾನವನು ಬದುಕುವನೋ ಸಾಯುವನೋ ಅದೇ ಆತನ ದೇವರಾಗಿರು

(ಶೈಖುಲ್ ಇಸ್ಲಾಮ್ ಇಬ್ನ್ ತೀಮಿಯಾ ಅಲ್ ಉಬೂದಿಯ ಗ್ರಂಥ

ಪ್ರೀತಿ ಪಾತ್ರರು, ಸಂಪತ್ತು, ಸ್ಥಾನಮಾನ, ಖ್ಯಾತಿ, ದೇಶ, ವರ್ಗ, ದೇಹ
ನಾಯಕರು, ಆಡಳಿತಗಾರರು, ಜ್ಯೋತಿಷಿಗಳು, ಪುರೋಹಿತರು ಇತ್ಯಾದಿ ಎಲ್ಲರೂ ದೇವ
ಪರಿಗಣಿಸಲ್ಪಡುತ್ತಾರೆ. ಅವುಗಳನ್ನು ಪರಮವಾಗಿ ಪ್ರೀತಿಸಿ, ಅವುಗಳಿಗಾಗಿ ಸಾಯುವ
ಬದುಕುವ ಅನೇಕ ಮಂದಿಯನ್ನು ಕಾಣಬಹುದು. ಹೀಗೆ ಮಾನವನು ದಾಸರ ದಾಸ
ಅವನ ಉಪಯೋಗಕ್ಕಾಗಿ ಉಂಟು ಮಾಡಿದ ಸೇವಕರ ಸೇವಕನಾಗಿ ಬಿಡುತ್ತಾನೆ.

ಹೀಗೆ ಮಾನವನು ತನ್ನ ದೂರು ಬೇಡಿಕೆಗಳನ್ನು ಭಕ್ತ್ಯಾದರಗಳಿಂದ ಯಾರ ಮ
ಸಮರ್ಪಿಸುತ್ತಾನೋ ಅದುವೇ ಆತನ ದೇವರಾಗಿರುವುದು. ತನ್ನ ಸರ್ವೋನ್ನತ ತಲೆ
ಯಾರ ಮುಂದೆ ಭಯದಿಂದ ಬಾಗಿಸುವನೋ ಅದು ಕಲ್ಲು, ಮರ, ಸೂರ್ಯ, ಚ
ನಕ್ಷತ್ರ, ಗಾಳಿ, ಸಿಡಿಲು, ಮಿಂಚು, ದೇವಚರ, ಪಿಶಾಚಿ, ಮಹಾಪುರುಷರು, ಗೋರಿ
ಹುತಾತ್ಮರು, ಮಂಟಪಗಳು, ಪ್ರತಿಮೆಗಳು ಇತ್ಯಾದಿಗಳಿಗೆ ದೇವತ್ವವನ್ನು ಕಲ್ಪಿಸುತ್ತ

ಪ್ರಪಂಚದೊಡೆಯನಾದ ಅಲ್ಲಾಹನ ದೇವತ್ವವನ್ನು ಅಂಗೀಕರಿಸದವರೆಲ್ಲರೂ
ದೇವೀ ದೇವತೆಗಳನ್ನು ಪ್ರತಿಷ್ಠಾಪಿಸಲೇಬೇಕಾಗುತ್ತದೆ. ಆದ್ದರಿಂದಲೇ ಇಸ್ಲಾಮ್
ವಿಶ್ವಾಸ ನಿರಾಕರಣೆಯಿಂದ ಆರಂಭಿಸಿದೆ. ಅನ್ಯ ಆರಾಧ್ಯರಿಲ್ಲ, ಅಲ್ಲಾಹನ ಹೊ
ಎಂಬುದು ಅದರ ಪ್ರಥಮ ವಾದವಾಗಿದೆಯಷ್ಟೇ. ಅದು ಸಂಪೂರ್ಣ ನಿರಾಕರಣೆಯಾ
ಎಲ್ಲಾ ಕಪಟ ದೇವರನ್ನು ಅದು ತಿರಸ್ಕರಿಸುತ್ತದೆ. ಕಲ್ಲು, ಮಣ್ಣು, ಪ್ರತಿಮೆ, ಹೆಣ್ಣು, ಹೊ
ದೇಶ, ಭಾಷೆ, ವರ್ಗ, ವರ್ಣ, ವಿದ್ವಾಂಸ, ಪುರೋಹಿತ, ನಾಯಕ, ಆಡಳಿತಗಾರ,
ಸಂತ ಇತ್ಯಾದಿ ಯಾವುದೂ ದೇವರಲ್ಲವೆಂದು ಈ ಪವಿತ್ರ ವಾಕ್ಯ ಸಾರುತ್ತಿದೆ.
ಕೇವಲ ಸಚೇತನ ಅಥವಾ ಅಚೇತನ ವಸ್ತುಗಳಾಗಿವೆ. ಎಲ್ಲವೂ ಅಲ್ಲಾಹನ ಸೃಷ್ಟಿ
ಸೃಷ್ಟಿಗಳಿಗೆ ಸೃಷ್ಟಿಕರ್ತನ ಸ್ಥಾನವನ್ನು ಸರ್ವಥಾ ನೀಡಬಾರದು. ಆದ್ದರಿಂದ ಮಾನ
ತನ್ನ ಜೀವನವನ್ನು ಸೃಷ್ಟಿಕರ್ತ, ಒಡೆಯ ಮತ್ತು ನಿಯಂತ್ರಕನಾದ ಅಲ್ಲಾಹನಿಗಲ್ಲದೆ
ಯಾವುದಕ್ಕೂ ಅರ್ಪಿಸಬಾರದು.

"ಹೇಳಿರಿ ನನ್ನ ನಮಾಝ್, ನನ್ನ ಸರ್ವ ಉಪಾಸನಾ ವಿಧಿಗಳು, ನನ್ನ ಜೀ
ಮತ್ತು ಮರಣ ಎಲ್ಲವೂ ಯಾವ ಸಹಭಾಗಿಯೂ ಇಲ್ಲದ ಸರ್ವಲೋಕ ಪಾಲಕನಿಗಾ
ಇದನ್ನೇ ನನಗೆ ಆದೇಶಿಸಲಾಗಿದೆ. ನಾನು ಆಜ್ಞಾನುಸರಣೆಯೊಂದಿಗೆ ಶಿರ ಬಾಗುವವ
ಸರ್ವ ಪ್ರಥಮನಾಗಿರುತ್ತೇನೆ."

(ಪವಿತ್ರ ಕುರ್‌ಆನ್,6: 162-

## ್ವಾಸದ ಮೂಲ

ತೌಹೀದ್, ಇಸ್ಲಾಮಿ ವಿಶ್ವಾಸದ ಮೂಲ ಬುನಾದಿಯಾಗಿದೆ. ಬೀಜದಿಂದ ಮರ ಯುವಂತೆಯೇ ತೌಹೀದ್‌ನಿಂದ ಜೀವನ ಬೆಳೆಯುತ್ತದೆ. ಬೀಜದ ವೈಶಿಷ್ಟ್ಯವು ಮರದ ಯ ಅಂಶದಲ್ಲಿಯೂ ಪ್ರಕಟವಾಗುವಂತೆಯೇ ತೌಹೀದ್ ಅದಿಷ್ಟಿತ ಜೀವನದ ಎಲ್ಲ ಗಳಲ್ಲಿಯೂ ಅದರ ವೈಶಿಷ್ಟ್ಯಗಳಿರುತ್ತವೆ. ಆದ್ದರಿಂದ ಪವಿತ್ರ ಕುರ್‌ಆನ್ ಆ ವಿಶಿಷ್ಟ ವನ್ನು ಉತ್ತಮವಾದ ಮರಕ್ಕೆ ಹೋಲಿಸಿದೆ.

ಅಲ್ಲಾಹನು 'ಕಲಿಮ ತಯ್ಯಿಬ' (ಪವಿತ್ರ ವಚನ)ವನ್ನು ಯಾವುದಕ್ಕೆ ಲಿಸಿರುತ್ತಾನೆಂದು ನೀವು ನೋಡುತ್ತಿಲ್ಲವೇ? ಅದರ ಉಪಮೆ ಹೀಗಿದೆ: ''ಒಂದು ಮ ಜಾತಿಯ ಮರ, ಅದರ ಬೇರುಗಳು ನೆಲದೊಳಗೆ ಆಳಕ್ಕೆ ಸ್ಥಿರವಾಗಿ ನಾಟಿವೆ. ಗಳು ಆಕಾಶಕ್ಕೆ ಮುಟ್ಟಿವೆ. ಅದು ಸದಾ ಕಾಲವೂ ತನ್ನ ಪ್ರಭುವಿನ ಅನುಜ್ಞೆಯಿಂದ ಫಲಗಳನ್ನು ಕೊಡುತ್ತಿವೆ. ಜನರು ಇವುಗಳಿಂದ ಪಾಠ ಕಲಿಯಲೆಂದು ಅಲ್ಲಾಹ್ ಈ ಹರಣೆಯನ್ನು ಕೊಡುತ್ತಾನೆ.'' (ಪವಿತ್ರ ಕುರ್‌ಆನ್,14: 24-25)

ಮರದ ಬೇರುಗಳು ಭೂಮಿಯ ಆಳದಲ್ಲಿರುವಂತೆಯೇ ಪವಿತ್ರ ವಚನವು ಮಾನವನ ಯಾಂತರಾಳದಲ್ಲಿ ಧೃಢವಾಗಿರುತ್ತದೆ. ಮರದ ಫಲಗಳು ರೆಂಬೆಗಳಲ್ಲಿ ಕಾಣಿಸುವಂತೆಯೇ ೀದ್‌ನ ಸತ್ಫಲಗಳು ಜೀವನದಾದ್ಯಂತ ಪ್ರಕಟವಾಗುತ್ತದೆ.

ತೌಹೀದ್ ಇಸ್ಲಾಮಿ ಜೀವನದ ಕೇಂದ್ರ ಬಿಂದುವಾಗಿದೆ. ನ್ಯೂಕ್ಲಿಯಸ್, ಜೀವನ ಸುತ್ತ ತಿರುಗಬೇಕು. ಆರಾಧನಾ ರಂಗದಂತೆಯೇ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ೀಯ, ಆಡಳಿತ ಇತ್ಯಾದಿ ಎಲ್ಲ ರಂಗಗಳೂ ಅದರಿಂದ ರೂಪುಗೊಳ್ಳಬೇಕು. ಹೀಗೆ ವಾಕ್ಯವನ್ನು ಗ್ರಹಿಸಿ ಮೈಗೂಡಿಸಿದಾಗ ಮಾತ್ರ ಅದರ ಸತ್ಫಲಗಳು ವ್ಯಕ್ತಿ ಮತ್ತು ಜಕ್ಕೆ ದೊರೆಯುವುದು.

## ೀದ್ ಜೀವನದ ವಿವಿಧ ರಂಗಗಳಲ್ಲಿ

ಮಾನವ ಸಮಾಜದ ಮಾರ್ಗದರ್ಶನಕ್ಕಾಗಿ ನೇಮಿಸಿದ ಎಲ್ಲ ಪ್ರವಾದಿಗಳ ಧನೆಯ ಮೂಲ ವಿಶ್ವಾಸ ತೌಹೀದ್ ಆಗಿತ್ತು. ಆ ಪದವು ಕುರ್‌ಆನ್ ಅಥವಾ ದಿ ಚರ್ಯೆಯಲ್ಲಿಲ್ಲ. ಇಸ್ಲಾಮನ್ನು ಪರಿಚಯ ಪಡಿಸಲಿಕ್ಕಾಗಿ ಜೀವನ ಪದ್ಧತಿ, ನೀತಿ ತೆ, ಆಂದೋಲನ ಇತ್ಯಾದಿ ಪದಗಳನ್ನು ಬಳಸುವಂತೆ ಇಸ್ಲಾಮಿನ ಮೂಲ ಸಿದ್ಧಾಂತವನ್ನು ರ್ಚಿಸಲಿಕ್ಕಾಗಿ ವಿದ್ವಾಂಸರು ಈ ಪದವನ್ನು ಬಳಸುತ್ತಿದ್ದಾರೆ.

ಸಮಾಜದ ವಿಶ್ವಾಸ, ಜೀವನ ಕ್ರಮಗಳು ತೌಹೀದ್‌ನಿಂದ ವಿಮುಖವಾದಾಗ ಮರಳಿ ಕರೆ ತರಲು ಪ್ರವಾದಿಗಳು ಪ್ರಯತ್ನಿಸುತ್ತಿದ್ದರು. ಜೀವನದ ಯಾವ ರಂಗಗಳು

ತೌಹೀದ್‌ನಿಂದ ದೂರ ಸರಿಯುತ್ತದೋ ಆ ರಂಗಗಳಿಗೆ ಅವರು ವಿಶೇಷ ಗ
ನೀಡುತ್ತಿದ್ದರು. ಇಸ್ಲಾಮಿನ ದೃಷ್ಟಿಯಲ್ಲಿ ತೌಹೀದ್‌ನಿಂದ ದೂರ ಸರಿಯುವುದೇ ಪ
ರೋಗವಾಗಿದೆ. ಸಾಮಾನ್ಯವಾಗಿ ತಜ್ಞ ವೈದ್ಯರು ದೇಹದ ಕಾಯಿಲೆ ಪೀಡಿತ ಭಾಗಕ್ಕೆ ಚ
ನೀಡುತ್ತಾರಲ್ಲವೇ ಪ್ರವಾದಿಗಳೂ ಹಾಗೆಯೇ ಮಾಡಿದ್ದರು.

## ಆರಾಧನಾ ರಂಗ

ಜನರು ಸಾಮಾನ್ಯವಾಗಿ ಮೂಢನಂಬಿಕೆ ಮತ್ತು ಅನಾಚಾರಗಳ ಗುಲಾಮರಾಗುತ
ವೈಜ್ಞಾನಿಕ ಪ್ರಗತಿ, ತಾಂತ್ರಿಕ ವಿದ್ಯೆಯ ಪ್ರಸಾರ, ವೈಜ್ಞಾನಿಕ ಬೆಳವಣಿಗೆ, ಬೌದ್ಧಿಕ ವಿಕ
ಮಾನವನನ್ನು ಅವುಗಳಿಂದ ರಕ್ಷಿಸಲಾಗುವುದಿಲ್ಲವೆಂದು ಆಧುನಿಕ ಕಾಲದ ಅನುಭವ
ನಿಚ್ಚಳ ಪಡಿಸಿವೆ. ಪರಿಚಿತ ಮಾನವ ಇತಿಹಾಸದಾದ್ಯಂತ ಸಮಾಜವು ಅಲ್ಲಾಹನ
ವಿಶೇಷತೆ ಮತ್ತು ಹಕ್ಕುಗಳಲ್ಲಿ ಇತರರನ್ನು ಭಾಗಿಗೊಳಿಸುತ್ತಲಿತ್ತು. ಇಂದಿನ ಅವಸ್ಥೆಯೂ ಅ

ಆದ್ದರಿಂದ ಹೆಚ್ಚಿನ ಪ್ರವಾದಿಗಳು ಮೂಢನಂಬಿಕೆ, ಅನಾಚಾರ, ಬಹುದೇವಾರಾಧ
ವಿರುದ್ಧ ಜನರಿಗೆ ತಿಳುವಳಿಕೆ ನೀಡುತ್ತಿದ್ದರು. ಪ್ರವಾದಿ ನೂಹ್‌ರ(ಅ) ಜನತೆಯು ಮ
ಇತಿಹಾಸದ ಪ್ರಥಮ ಐತಿಹಾಸಿಕ ಸಮಾಜ. ಅವರ ಸ್ಥಿತಿಯನ್ನು ಕುರ್‌ಆನ್ ಹೀಗೆ ವಿವರಿ

**"ನಾವು ನೂಹ್‌ರನ್ನು ಅವರ ಜನಾಂಗದ ಕಡೆಗೆ ರವಾನಿಸಿದೆವು. ಅ
ಹೀಗೆಂದರು, 'ನನ್ನ ಜನಾಂಗದವರೇ! ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅ
ಹೊರತು, ನಿಮಗೆ ಇನ್ನಾವ ಆರಾಧ್ಯನೂ ಇಲ್ಲ. ನೀವು ಭಯ ಪಡುವುದಿಲ್ಲವೇ?'
(ಪವಿತ್ರ ಕುರ್‌ಆನ್,23:**

'ನಾವು ನೂಹ್‌ರನ್ನು ಅವರ ಜನಾಂಗದ ಕಡೆಗೆ ರವಾನಿಸಿದೆವು. ಅವರು ಹೇಳಿ
ನಾನು ನಿಮಗೆ ಸ್ಪಷ್ಟ ಎಚ್ಚರಿಕೆ ನೀಡುತ್ತೇನೆ. ಅಲ್ಲಾಹನ ಹೊರತು ಇತರ ಯಾರ
ನೀವು ಆರಾಧಿಸಬೇಡಿರಿ. ಇಲ್ಲದಿದ್ದರೆ ಯಾತನಾಮಯ ಶಿಕ್ಷೆಯು ನಿಮ್ಮ ವೆ
ಬಂದೆರಗುವುದೆಂದು ನಾನು ಭಯ ಪಡುತ್ತೇನೆ.'

ಮೂಢನಂಬಿಕೆ ಮತ್ತು ವಿಗ್ರಹಾರಾಧನೆಗಳ ಪಾಲಕರಾಗಿದ್ದ ಗಣ್ಯರ ಪ್ರತಿಕ್ರಿಯೆ
ಸಂಪೂರ್ಣ ಭಿನ್ನವಾಗಿತ್ತು. ಅವರು ಹೇಳಿದರು: **"ನೀವು ನಿಮ್ಮ ಆರಾಧ್ಯರನ್ನು ಸರ್ವ
ಕೈ ಬಿಡಬೇಡಿರಿ. ವದ್ದ್, ಸುವಾಅ್, ಯಗೂಸ್, ಯಊಕ್, ನಸ್ರ್‌ಗಳನ್ನು ಕೈ ಬಿಡಬೇ
ಹೀಗೆ ಅನೇಕ ಮಂದಿಯನ್ನು ಅವರು ದಾರಿ ಗೆಡಿಸಿದರು."**(ಪವಿತ್ರ ಕುರ್‌ಆನ್,71: 23

ಪ್ರವಾದಿ ಇಬ್ರಾಹೀಮ್(ಅ) ತಮ್ಮ ಜನತೆಯ ಬಹುದೇವಾರಾಧನೆಯ ವಿರ
ಹೋರಾಡಿದರು. "ಇವರಿಗೆ ಇಬ್ರಾಹೀಮರ ವೃತ್ತಾಂತವನ್ನು ತಿಳಿಸಿರಿ. ಅವರು ತಮ್ಮ ತ
ಮತ್ತು ಜನಾಂಗದೊಡನೆ, 'ನೀವು ಇದೆಂಥ ವಸ್ತುಗಳನ್ನು ಪೂಜಿಸುತ್ತಿರುವಿರಿ?' ಎ

ಾಗ ಅವರು, 'ಇವು ಕೆಲವು ವಿಗ್ರಹಗಳು, ನಾವು ಇವುಗಳನ್ನು ಪೂಜಿಸುತ್ತೇವೆ ಮತ್ತು ಗಳ ಸೇವೆಯಲ್ಲೇ ನಿರತರಾಗಿರುತ್ತೇವೆ' ಎಂದರು. ಆಗ ಇವರು 'ನೀವು ಇವುಗಳನ್ನು ು ಪ್ರಾರ್ಥಿಸಿದಾಗ ಇವು ಕೇಳುತ್ತವೆಯೇ ಅಥವಾ ಇವು ನಿಮಗೇನಾದರೂ ಲಾಭವನ್ನಾಗಲೀ ಯನ್ನಾಗಲಿ ಮಾಡುತ್ತವೆಯೇ?' ಎಂದು ಕೇಳಿದರು. ಅದಕ್ಕೆ ಅವರು, 'ಇಲ್ಲ ಆದರೆ ್ ಪೂರ್ವಿಕರು ಹೀಗೆಯೇ ಮಾಡುತ್ತಿರುವುದನ್ನು ನಾವು ಕಂಡಿದ್ದೇವೆ' ಎಂದರು. ಆಗ ್ರಹೀಮ್ ಕೇಳಿದರು, 'ನೀವು ಮತ್ತು ನಿಮ್ಮ ಪೂರ್ವಿಕರು ಪೂಜಿಸುತ್ತಾ ಬಂದಿರುವ ಗಳನ್ನು ನೀವೆಂದಾದರೂ (ಕಣ್ತೆರೆದು) ನೋಡಿದ್ದುಂಟೆ? ಇವೆಲ್ಲವೂ ನನ್ನ ಶತ್ರುಗಳು. ಲೋಕಗಳ ಪಾಲಕ ಪ್ರಭುವೊಬ್ಬನ ಹೊರತು. ಅವನು ನನ್ನನ್ನು ಸೃಷ್ಟಿಸಿದನು ಮತ್ತು ೇ ನನಗೆ ಮಾರ್ಗದರ್ಶನ ನೀಡುತ್ತಾನೆ. ಅವನು ನನಗೆ ಉಣಿಸುತ್ತಾನೆ ಮತ್ತು ಸುತ್ತಾನೆ. ನಾನು ಕಾಯಿಲೆ ಬಿದ್ದಾಗ ಅವನೇ ನನ್ನನ್ನು ಗುಣಪಡಿಸುತ್ತಾನೆ. ಅವನೇ ಮರಣ ಕೊಡುವನು ಮತ್ತು ಪುನಃ ಜೀವಂತಗೊಳಿಸುವನು. ಪ್ರತಿಫಲ ನೀಡಲಾಗುವ ನ ಅವನು ನನ್ನ ತಪ್ಪುಗಳನ್ನು ಕ್ಷಮಿಸುವನೆಂದೂ ನಾನು ಅವನಿಂದ ನಿರೀಕ್ಷಿಸುತ್ತಿದ್ದೇನೆ'' ು ಹೇಳಿದರು. (ಪವಿತ್ರ ಕುರ್‌ಆನ್,26: 69-82)

ತಮ್ಮ ಜನತೆಗೆ ಈ ರೀತಿ ಆಜ್ಞಾಪಿಸುವಂತೆ ಪ್ರವಾದಿ ಮುಹಮ್ಮದ್‌ರಿಗೆ(ಸ) ಲಾಯಿತು: ''ಈಗ ಹೇಳಿರಿ ನೀವು 'ಲಾತ್' 'ಉಝ್ಝಾ' ಮತ್ತು ಮೂರನೆಯ ದೇವಿ ಾತ್‌ನ ವಾಸ್ತವಿಕತೆಯ ಕುರಿತು ಸ್ವಲ್ಪವಾದರೂ ವಿವೇಚಿಸಿದ್ದೀರಾ? ಏನು! ನಿಮಗೆ ು ಮತ್ತು ಅಲ್ಲಾಹನಿಗೆ ಪುತ್ರಿಯರೇ? ಇದು ದೊಡ್ಡ ದಾಂಧಲೆಯ ವಿತರಣೆಯೇ ನಿಜವಾಗಿ ಇವೆಲ್ಲ ನೀವು ಮತ್ತು ನಿಮ್ಮ ಪೂರ್ವಜರು ಇಟ್ಟು ಕೊಂಡಿರುವ ಕೆಲವು ಗಳೇ ಹೊರತು ಇನ್ನೇನೂ ಅಲ್ಲ.'' (ಪವಿತ್ರ ಕುರ್‌ಆನ್,53: 19-23)

ಬಹುದೇವಾರಾಧನೆಗೆ ಎಡೆ ಕೊಡುವ ಎಲ್ಲ ದ್ವಾರಗಳನ್ನೂ ಇಸ್ಲಾಮ್ ಮುಚ್ಚಿದೆ. ್ಹನ ಹೊರತು ಯಾರಿಗೂ ಪರೋಕ್ಷದ ವಿಷಯ ತಿಳಿದಿಲ್ಲ. ಅಲೌಕಿಕ ಮಾರ್ಗದಿಂದ ಲು ಅಥವಾ ಶಿಕ್ಷಿಸಲು, ನೆರವಾಗಲು ಅಥವಾ ಹಾನಿಯುಂಟುಮಾಡಲು ಸಾಧ್ಯವಿಲ್ಲವೆಂದು ಘಂಟಾಘೋಷವಾಗಿ ಸಾರಿದೆ.

''ಇವರೊಡನೆ ಹೇಳಿರಿ: ಭೂಮಿ-ಆಕಾಶಗಳಲ್ಲಿ ಪರೋಕ್ಷದ ಜ್ಞಾನವುಳ್ಳವರು ್ಹನ ಹೊರತು ಯಾರೂ ಇಲ್ಲ.'' (ಪವಿತ್ರ ಕುರ್‌ಆನ್,27: 65)

''ಓ ಪೈಗಂಬರರೇ ಇವರೊಡನೆ ಹೇಳಿರಿ, ನನ್ನಲ್ಲಿ ಅಲ್ಲಾಹನ ಖಜಾನೆಗಳಿವೆಯೆಂದು ನಿಮ್ಮೊಡನೆ ಹೇಳುವುದಿಲ್ಲ. ನಾನು ಪರೋಕ್ಷ ಜ್ಞಾನಿಯೂ ಅಲ್ಲ.''

(ಪವಿತ್ರ ಕುರ್‌ಆನ್,6: 50, 11:31)

"ಪರೋಕ್ಷದ ಬೀಗದ ಕೈಗಳು ಅವನ ವಶದಲ್ಲೇ ಇವೆ." (ಪವಿತ್ರ ಕುರ್‌ಆನ್,

"ನನ್ನ ಸ್ವಂತ ಹಿತಾಹಿತಗಳ ಅಧಿಕಾರ ನನಗಿಲ್ಲ. ಅಲ್ಲಾಹನು ಯಾವು ಇಚ್ಛಿಸುತ್ತಾನೋ ಅದು ಆಗುತ್ತದೆ. ಮತ್ತು ನನಗೆ ಗೈಬ್(ಪರೋಕ್ಷ)ದ ಜ್ಞಾನವಿರುತಿ ನಾನು ಅನೇಕ ಲಾಭಗಳನ್ನು ನನಗಾಗಿ ಒದಗಿಸಿಕೊಳ್ಳುತ್ತಿದ್ದೆ ಮತ್ತು ನನಗೆಂದೂ ತಟ್ಟುತ್ತಿರಲಿಲ್ಲ. ನನ್ನ ಮಾತಿನ ಮೇಲೆ ವಿಶ್ವಾಸವಿಡುವವರಿಗೆ ನಾನು ಕೇವಲ ಎ ಕೊಡುವವನೂ ಸುವಾರ್ತೆ ನೀಡುವವನೂ ಆಗಿರುತ್ತೇನೆ." (ಪವಿತ್ರ ಕುರ್‌ಆನ್,7:

"ಇವರು ಅಲ್ಲಾಹನನ್ನು ಬಿಟ್ಟು ಇವರಿಗೆ ನಷ್ಟವನ್ನಾಗಲೀ ಲಾಭವನ್ನಾ ಉಂಟು ಮಾಡದಂಥವರನ್ನು ಆರಾಧಿಸುತ್ತಾರೆ ಮತ್ತು 'ಅವರು ಅಲ್ಲಾಹನ ಬಳಿ ಶಿಫಾರಸು ಮಾಡುವವರು' ಎಂದು ಹೇಳುತ್ತಾರೆ. ಓ ಪೈಗಂಬರರೇ ಇವರೊಡನೆ ಹ 'ಅಲ್ಲಾಹನು ಆಕಾಶಗಳಲ್ಲಾಗಲಿ, ಭೂಮಿಯಲ್ಲಾಗಲಿ ತಿಳಿಯದಂತಹ ಸುದ್ದಿಯನ್ನು ಅವನಿಗೆ ತಿಳಿಸುತ್ತೀರಾ? ಇವರು ಸಹಭಾಗಿಗಳನ್ನಾಗಿ ಮಾಡುತ್ತಿರುವವುಗಳಿಂದೆಲ್ಲ ಅತಿ ಪಾವನನಾಗಿರುತ್ತಾನೆ." (ಪವಿತ್ರ ಕುರ್‌ಆನ್,10

ಅಲ್ಲಾಹನ ಹೊರತು ಯಾರಿಗೂ ಪರೋಕ್ಷ ಜ್ಞಾನವಿಲ್ಲ. ಅಲೌಕಿಕ ರೀತಿ ಲಾಭ ಅಥವಾ ನಷ್ಟ ಮಾಡಲು ಸಾಧ್ಯವಿಲ್ಲವೆಂದು ಇಸ್ಲಾಮ್ ಸ್ಪಷ್ಟ ಪಡಿಸಿದೆ. ಹೊರತು ಇತರ ಯಾರನ್ನೂ ಆರಾಧಿಸಬಾರದೆಂದೂ ಆಜ್ಞಾಪಿಸಿದೆ.

## ಆರ್ಥಿಕ ರಂಗದಲ್ಲಿ

ಸಂಪತ್ತು ಅಲ್ಲಾಹನದ್ದು ಅದನ್ನು ಹೇಗೆ ಗಳಿಸಬೇಕು, ಹೇಗೆ ವ್ಯಯಿಸ ಎಂಬಿತ್ಯಾದಿಗಳನ್ನು ಆದೇಶಿಸುವ ಪರಮಾಧಿಕಾರ ಅಲ್ಲಾಹನಿಗೆ ಮಾತ್ರ. ಇದುವೇ ಆ ರಂಗದ ತೌಹೀದ್. ಸಂಪತ್ತು ನನ್ನದು ಅಥವಾ ನನ್ನ ರಾಷ್ಟ್ರದ್ದು, ಅದನ್ನು ವ್ಯಯಿಸಬೇಕೆಂದು ನಿರ್ಧರಿಸುವ ಅಧಿಕಾರ ಮತ್ತು ಹಕ್ಕು ಮಾನವನದ್ದು, ಅದರಲ್ಲಿ ಧ ದೇವರು, ಕುರ್‌ಆನ್, ಸುನ್ನತ್ ಹಸ್ತಕ್ಷೇಪಿಸಬಾರದು. ಹೀಗೆ ವಾದಿಸುವುದು ನಂಬುವುದು ತೌಹೀದ್‌ಗೆ ತೀರಾ ವಿರುದ್ಧವಾದ ಶಿರ್ಕ್ ಆಗಿದೆ. ಆರ್ಥಿಕ ರಂಗದಲ್ಲಿ ಅವಲಂಬಿಸಿದ್ದ ಹಲವರ ಕಥೆಯನ್ನು ಕುರ್‌ಆನ್ ವಿವರಿಸಿದೆ. ಉದಾಹರಣೆಗೆ ಪ್ರ ಶುಐಬ್‌ರ(ಅ) ಜನತೆ. ಅವರು ಆರ್ಥಿಕ ರಂಗದಲ್ಲಿ ಧರ್ಮದ ಹಸ್ತಕ್ಷೇಪವಿರಬಾರ ನಿರ್ಧರಿಸಿದ್ದರು. ಆದ್ದರಿಂದ ಅವರಿಗೆ ನೇಮಕಗೊಂಡ ಪ್ರವಾದಿಯವರು ಈ ವಿಶ್ವಾಸದ ಕೆಡುಕುಗಳನ್ನು ತಿದ್ದಿಕೊಳ್ಳುವಂತೆ ಒತ್ತಾಯಿಸಿದರು.

"'ಮದ್‌ಯನ್'ರ ಕಡೆಗೆ ನಾವು ಅವರ ಸಹೋದರ 'ಶುಐಬ್'ರನ್ನು ಕಳುಹಿ ಅವರು ಹೇಳಿದರು: 'ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮ ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಪ

ರ್ಗದರ್ಶನ ಬಂದಿರುತ್ತದೆ. ಆದುದರಿಂದ ಅಳತೆ ಮತ್ತು ತೂಕವನ್ನು ಸರಿಯಾಗಿಸಿರಿ. ಗೆ ಅವರ ವಸ್ತುಗಳನ್ನು ಕಡಿತಗೊಳಿಸಿ ಕೊಡಬೇಡಿರಿ. ಮತ್ತು ಭೂಮಿಯಲ್ಲಿ ುರಣೆಯಾದ ಬಳಿಕ ಕ್ಷೋಭೆಯನ್ನುಂಟು ಮಾಡಬೇಡಿರಿ" (ಪವಿತ್ರ ಕುರ್‌ಆನ್,7:. 85)

ಅಲ್ಲಾಹನ ಆರಾಧನೆಯ ಬೇಡಿಕೆಗನುಸಾರ ಆರ್ಥಿಕ ರಂಗವನ್ನು ಸುಧಾರಿಸಬೇಕಾಗಿತ್ತು. ಅವರಿಗೆ ಸ್ಪಷ್ಟವಾಗಿ ತಿಳಿದಿತ್ತು. ಆದ್ದರಿಂದ ಅವರು ಪ್ರವಾದಿ ಶುಐಬ್‌ರೊಡನೆ ಹೀಗೆ ದ್ದರು:

ನಾವು 'ಮದ್‌ಯನ್'ನವರ ಕಡೆಗೆ ಅವರ ಬಂಧು ಶುಐಬ್‌ರನ್ನು ಕಳುಹಿಸಿದೆವು. ು (ಹೀಗೆ) ಹೇಳಿದರು: "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ರಿ. ಅವನ ಹೊರತು ಇನ್ನಾರೂ ನಿಮ್ಮ ಆರಾಧ್ಯನಿಲ್ಲ. ನೀವು ಅಳತೆ ಮತ್ತು ದಲ್ಲಿ ಕಡಿಮೆ ಮಾಡಬೇಡಿರಿ. ಇಂದು ನಾನು ನಿಮ್ಮನ್ನು ಉತ್ತಮ ಸ್ಥಿತಿಯಲ್ಲಿ ್ತಿದ್ದೇನೆ. ಆದರೆ ನಾಳೆ ನಿಮ್ಮ ಮೇಲೆ, ಎಲ್ಲರನ್ನು ಆವರಿಸಿಕೊಳ್ಳುವ ಯಾತನೆಯ ೊಂದು ಬರಲಿರುವ ವಿಷಯದಲ್ಲಿ ನಾನು ಭಯ ಪಡುತ್ತೇನೆ. ಓ ನನ್ನ ಜನಾಂಗ ವರೇ, ನ್ಯಾಯದೊಂದಿಗೆ ಪೂರ್ತಿಯಾಗಿ ಅಳತೆ ಮತ್ತು ತೂಕ ಮಾಡಿ ಕೊಡಿರಿ. ಗೆ ಅವರ ವಸ್ತುಗಳನ್ನು ಕಡಿಮೆ ಮಾಡಿ ಕೊಡಬೇಡಿರಿ ಮತ್ತು ಭೂಮಿಯಲ್ಲಿ ಕ್ಷೋಭೆ ುತ್ತಾ ನಡೆಯ ಬೇಡಿರಿ ನೀವು ಸತ್ಯ ವಿಶ್ವಾಸಿಗಳಾಗಿರುವಿರಾದರೆ ಅಲ್ಲಾಹನು ನೀಡಿದ ಾಯವೇ ನಿಮಗೆ ಉತ್ತಮ. ಅಂತು ನಾನೇನೂ ನಿಮ್ಮ ಮೇಲ್ವಿಚಾರಕನಲ್ಲ."

ಅವರು ಉತ್ತರವಿತ್ತರು: "ಓ ಶುಐಬ್! ನಾವು ನಮ್ಮ ಪೂರ್ವಿಕರು ಆರಾಧಿಸುತ್ತಿದ್ದ ್ಯರನ್ನೆಲ್ಲಾ ತ್ಯಜಿಸಬೇಕೆಂದಾಗಲೀ ನಮ್ಮ ಸೊತ್ತುಗಳನ್ನು ನಮಗೆ ಸರಿ ಕಂಡಂತೆ ುವ ಅಧಿಕಾರವಿಲ್ಲವೆಂದಾಗಲೀ ನಿನ್ನ ನಮಾಝ್ ನಿನಗೆ ಆಜ್ಞಾಪಿಸುತ್ತಿದೆಯೇ? ಒಬ್ಬನು ಮಾತ್ರ ಮಹಾ ಸೌಜನ್ಯಶೀಲನೂ ಸನ್ಮಾರ್ಗ ನಿಷ್ಠನೂ ಆಗಿ ಬಿಟ್ಟಿರುವೆ."

(ಪವಿತ್ರ ಕುರ್‌ಆನ್,11: 84-87)

ಇಲ್ಲಿ ನಮ್ಮ ಹಣ ಮತ್ತು ನಮ್ಮ ಇಷ್ಟದಂತೆ ಎಂಬುದರಲ್ಲಿ ಆ ಜನತೆಯ ಆರ್ಥಿಕ ನಲ್ಲಿ ತುಂಬಿದ್ದ ಶಿರ್ಕ್ ಮತ್ತು ಅಹಂಭಾವ ವ್ಯಕ್ತವಾಗುತ್ತದೆ.

ಆರ್ಥಿಕ ರಂಗದಲ್ಲಿ ಶಿರ್ಕ್ ಅವಲಂಬಿಸಿದ್ದ ಓರ್ವ ತೋಟಗಾರನ ಕಥೆ ಸೂರಾ ಕಹ್ಫ್‌ನಲ್ಲಿದೆ. ಆತನ ತೋಟವು ದೇವ ಶಿಕ್ಷೆಯಿಂದ ನಾಶವಾದಾಗ ಆತ ಹೀಗೆ ಪಿಸಿದ. ಕೊನೆಗೆ ಅವನ ಸಂಪೂರ್ಣ ಫಲಗಳು ನಾಶವಾದವು. ಅವನು ತನ್ನ ದ್ರಾಕ್ಷೆಯ ೂಗಳು ಅವುಗಳ ಚಪ್ಪರದೊಂದಿಗೆ ಮಗುಚಿ ಬಿದ್ದುದನ್ನು ನೋಡಿ ತಾನು ಹೂಡಿದ ವಾಳದ ಬಗ್ಗೆ ಗೋಳಾಡುತ್ತಾ; "ಅಕಟಾ! ನಾನು ನನ್ನ ಪ್ರಭುವಿನೊಂದಿಗೆ ಯಾರನ್ನೂ ಾಗಿ ಯನ್ನಾಗಿಸದಿರುತ್ತಿದ್ದರೆ! ಎನ್ನ ತೊಡಗಿದ" (ಪವಿತ್ರ ಕುರ್‌ಆನ್,18: 42)

ಸಂಪತ್ತು ಅಲ್ಲಾಹನದ್ದು. ಅದನ್ನು ಮಾನವನು ಅಲ್ಲಾಹನು ತೋರಿಸಿದ ರೀತಿಯ ಮಾತ್ರ ವ್ಯವಹರಿಸಬಹುದು. ಆದರೆ ಅನೇಕ ಜನರು ಸಂಪತ್ತಿನ ಮೇಲಿನ ಮಾನ ಒಡೆತನದ ಹಕ್ಕು ಸಂಪೂರ್ಣ ಮತ್ತು ಪರಮವೆಂದು ಭಾವಿಸುತ್ತಾರೆ. ಅಲ್ಲಾಹ್ ಹೇಳಿದ "ಅಲ್ಲಾಹನು ನಿಮಗೆ ನೀಡಿರುವುದರಿಂದ ನೀವು ವೆಚ್ಚ ಮಾಡಿರಿ" (ಪವಿತ್ರ ಕುರ್‌ಆನ್ 33) ಇಲ್ಲಿ ಕುರ್‌ಆನ್ ಅಲ್ಲಾಹನ ಸಂಪತ್ತು (ಮಾಲುಲ್ಲಾಹ್) ಎಂದು ಹೇಳಿದೆ. ಹಾಗೇ ಸಂಪತ್ತಿನ ಬಗ್ಗೆ ಹೇಳಿದೆಡೆಗಳಲ್ಲಿ 'ಅಲ್ಲಾಹನು ನಿಮಗೆ ನೀಡಿದ' ಎಂದು ಒತ್ತಿ ಹೇಳಲಾ

ಸ್ವಂತ ಸಾಮರ್ಥ್ಯದಿಂದ ಸಂಪತ್ತುಂಟಾಗುತ್ತದೆ. ಆದ್ದರಿಂದ ಅದು ತಮ್ಮ ಸ್ವಂತದ್ದೆ ಅನೇಕರು ಭಾವಿಸಿದ್ದಾರೆ. ಈ ಧೋರಣೆಯನ್ನೂ ಕುರ್‌ಆನ್ ಕಟುವಾಗಿ ವಿಮರ್ಶಿ "ನಾನು ಧನದ ರಾಶಿಯನ್ನೇ ಖರ್ಚು ಮಾಡಿ ಬಿಟ್ಟೆನೆಂದು ಅವನು ಹೇಳುತ್ತಾನೆ. ಅವನ ಯಾರೂ ಕಂಡಿಲ್ಲವೆಂದು ಅವನು ಭಾವಿಸುತ್ತಾನೆಯೇ? ನಾವು ಅವನಿಗೆ ಎರಡು ಕಣ್ಣುಗಳ ಒಂದು ನಾಲಗೆಯನ್ನೂ ಎರಡು ತುಟಿಗಳನ್ನೂ ಕೊಟ್ಟಿಲ್ಲವೇ ಮತ್ತು ಅವನಿಗೆ ಎ ಸುಸ್ಪಷ್ಟ ದಾರಿಗಳನ್ನು ತೋರಿಸಿಕೊಡಲಿಲ್ಲವೇ? ಆದರೆ ಅವನು ದುರ್ಗಮ ಏರನ್ನು ಏ ಸಾಹಸವನ್ನೇ ಮಾಡಲಿಲ್ಲ. ಆ ದುರ್ಗಮ ಏರು ಏನೆಂದು ನಿಮಗೇನು ಗೊ ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿಂದ ವಿಮೋಚಿಸುವುದು ಅಥವಾ ಹಸಿ ದಿನ ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೆಟ್ಟ ದರಿದ್ರನಿಗೆ ಉಣ ಬಡಿಸುವುದು.'

(ಪವಿತ್ರ ಕುರ್‌ಆನ್,90: 6

ಉತ್ತಮವಾದ ಆಹಾರವನ್ನು ಸೇವಿಸಬೇಕೆಂಬುದು ಕೇವಲ ಅಲ್ಲಾಹ ಆರಾಧಿಸುವುದರ ಬೇಡಿಕೆಯಾಗಿದೆ. "ನೀವು ಕೇವಲ ಅಲ್ಲಾಹನನ್ನು ಆರಾಧಿಸುವವರಾಗಿ ಎಂಬ ಮಾತು ಕುರ್‌ಆನಿನಲ್ಲಿ ಕೇವಲ ಮೂರು ಕಡೆಗಳಲ್ಲಿವೆ. ಆ ಪೈಕಿ ಎರಡು ಆಹಾರವನ್ನೇ ಸಂಬಂಧಿಸಿ ಅಲ್ಲಾಹನು ಹೀಗೆ ಹೇಳಿದ್ದಾನೆ:

"ಓ ಸತ್ಯ ವಿಶ್ವಾಸಿಗಳೇ ನೀವು ನಿಜವಾಗಿಯೂ ಅಲ್ಲಾಹನ ದಾಸ್ಯ-ಆರಾ ಮಾಡುವವರಾಗಿದ್ದರೆ, ನಾವು ನಿಮಗೆ ಒದಗಿಸಿರುವ ಶುದ್ಧವಾದ ವಸ್ತುಗಳನ್ನು ನಿರಾತಂಕ ಉಣ್ಣಿರಿ ಮತ್ತು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿರಿ." (ಪವಿತ್ರ ಕುರ್‌ಆನ್,2:

"ಆದುದರಿಂದ ಓ ಜನರೇ, ನೀವು ನಿಜಕ್ಕೂ ಅಲ್ಲಾಹನ ದಾಸ್ಯ-ಆರಾ ಮಾಡುವವರಾಗಿದ್ದರೆ ಅಲ್ಲಾಹನು ನಿಮಗೆ ದಯಪಾಲಿಸಿರುವ ಹಲಾಲ್ (ಧರ್ಮ ಸಮ ಹಾಗೂ ಶುದ್ಧವಾದ ಆಹಾರವನ್ನು ಉಣ್ಣಿರಿ ಮತ್ತು ಅಲ್ಲಾಹನ ಅನುಗ್ರಹಗಳಿಗೆ ಕೃತ ಸಲ್ಲಿಸಿರಿ." (ಪವಿತ್ರ ಕುರ್‌ಆನ್,16:

ಹಲಾಲ್-ಹರಾಮ್ ಉತ್ತಮ ಮತ್ತು ಕೆಟ್ಟದೆಂಬ ವಿವೇಚನೆಯಿಲ್ಲದೆ ತೋಚಿ ಆಹಾರ ಸೇವಿಸುವವರು ಕೇವಲ ಅಲ್ಲಾಹನ ಆರಾಧನೆ ಮಾಡುವವರಲ್ಲ. ಶಿ

ಡುವವರೆಂದರ್ಥ. ಆದ್ದರಿಂದಲೇ ಅಲ್ಲಾಹನು ಈ ವಿಷಯದಲ್ಲಿ ಎಲ್ಲ ಪ್ರವಾದಿಗಳಿಗೂ ಟ್ಟ ಆದೇಶವನ್ನು ನೀಡಿದ್ದಾನೆ. ಕುರ್‌ಆನ್‌ನ ಒಂದೆಡೆ ಮಾತ್ರ ಎಲ್ಲ ಪ್ರವಾದಿಗಳನ್ನೂ ಸಂಬೋಧಿಸಲಾಗಿದೆ. (ಯಾ ಅಯ್ಯುಹರ್ರಸೂಲ್) ಅಲ್ಲಿ ಆಹಾರದ ಬಗ್ಗೆ ಸ್ತಾಪಿಸಲಾಗಿದೆ. ಆಹಾರವು ಐಹಿಕ ಜೀವನದ ಆಧಾರವಷ್ಟೆ. ಅದರಲ್ಲಿ ಅಲ್ಲಾಹನ ೇಶವನ್ನು ಪಾಲಿಸುವುದೆಂದರೆ, ಇಡೀ ಜೀವನದಲ್ಲಿ ಅದರ ಪಾಲನೆ ಮಾಡಬೇಕೆಂದರ್ಥ. ್‌ಆನ್ ಹೇಳಿದೆ:

**"ಸಂದೇಶವಾಹಕರೆ, ಶುದ್ಧ ವಸ್ತುಗಳನ್ನು ಉಣ್ಣಿರಿ ಮತ್ತು ಸತ್ಕರ್ಮ ಮಾಡಿರಿ. ್ಯಯವಾಗಿಯೂ ನೀವು ಮಾಡುವುದೆಲ್ಲವನ್ನೂ ನಾನು ಚೆನ್ನಾಗಿ ಅರಿಯುತ್ತೇನೆ."**

**(ಪವಿತ್ರ ಕುರ್‌ಆನ್,23: 51)**

ಸಂಕ್ಷಿಪ್ತದಲ್ಲಿ ಆರಾಧನಾ ರಂಗದಂತೆಯೇ ಆರ್ಥಿಕ ರಂಗದಲ್ಲಿಯೂ ತೌಹೀದ್ ತ್ತು ಶಿರ್ಕ್ ಇದೆ. ಮಕ್ಕಾ ನಿವಾಸಿಗಳ ಆರಾಧನಾ ರಂಗದಲ್ಲಿ ಕಂಡು ಬಂದ ಶಿರ್ಕ್‌ನ ಪಗಳನ್ನು ವಿಮರ್ಶಿಸಿ ಅವುಗಳನ್ನು ಕೈ ಬಿಡುವಂತೆ ಒತ್ತಾಯಿಸಿರುವಂತೆಯೇ ಆರ್ಥಿಕ ಗದ ಕೆಡುಕುಗಳನ್ನು ತೊರೆಯಬೇಕೆಂದು ಕುರ್‌ಆನ್ ಕಟ್ಟುನಿಟ್ಟಾಗಿ ಆದೇಶಿಸಿದೆ.

**"ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ. ಅವರು ಜನರಿಂದ ೆಯುವಾಗ ಸಂಪೂರ್ಣ ಪಡೆಯುತ್ತಾರೆ ಮತ್ತು ಅಳತೆ ಅಥವಾ ತೂಕ ಮಾಡಿ (ಜನರಿಗೆ) ಡುವಾಗ ಕಡಿಮೆ ಕೊಡುತ್ತಾರೆ. ಒಂದು ಮಹಾದಿನದಂದು ಇವರನ್ನು ಎಬ್ಬಿಸಿ ಲಾಗುವುದೆಂದು ಇವರು ಗ್ರಹಿಸುವುದಿಲ್ಲವೇ? (ಅದು) ಎಲ್ಲ ಜನರೂ ಸರ್ವಲೋಕಗಳ ಲಕ ಪ್ರಭುವಿನ ಮುಂದೆ ನಿಲ್ಲುವ ದಿನವಾಗಿದೆ." (ಪವಿತ್ರ ಕುರ್‌ಆನ್,83: 1-6)**

ಸಂಪತ್ತು ನಮ್ಮದು, ಅದನ್ನು ನಮ್ಮ ಇಷ್ಟಾನುಸಾರ ವ್ಯವಹರಿಸುತ್ತೇವೆ, ಅದರಲ್ಲಿ ವರು ಅಥವಾ ಧರ್ಮದ ಹಸ್ತಕ್ಷೇಪವಿರಬಾರದೆಂದು ಹೇಳಿ ತಮಗೆ ತೋಚಿದಂತೆ ರ್ಸುವವರು ಆರ್ಥಿಕ ರಂಗದ ತೌಹೀದ್ ಮತ್ತು ಅದರ ಅನಿವಾರ್ಯ ಬೇಡಿಕೆಗಳನ್ನು ಪೂರ್ಣ ನಿರಾಕರಿಸುವವರಾಗಿದ್ದಾರೆ. ತೌಹೀದ್‌ನ ಈ ಅಂಶವು ಬಹುವಂಶ ಮರೆತು ೋಗಿರುವುದರಿಂದ ಜಮಾಅತೆ ಇಸ್ಲಾಮಿಯು ಈ ವಿಷಯದತ್ತ ಜನರ ಗಮನ ಸೆಳೆಯಲು ಯತ್ನಿಸುತ್ತಿದೆ. ಆಂದೋಲನವು ಈ ರಂಗದಲ್ಲಿ ಬಹಳಷ್ಟು ಯಶಸ್ಸು ಸಾಧಿಸಿದೆ. ನರಿಂದ ಸತ್ಯಾನ್ವೇಷಿಗಳು ತೌಹೀದ್‌ನ ಸಮಗ್ರತೆಯನ್ನು ಕಲಿತು ಮನಗಂಡಿದ್ದಾರೆ. ಅದನ್ನು ಪೂರ್ಣ ಜೀವನದ ಕೇಂದ್ರ ಬಿಂದು ಮತ್ತು ವಿಶ್ವಾಸವಾಗಿ ಅಳವಡಿಸಿಕೊಂಡಿದ್ದಾರೆ.

## ೇಹೇಚ್ಛೆಯನ್ನು ದೇವನಾಗಿಸುವವರು

ವಿವಾಹ, ವಿವಾಹ ವಿಚ್ಛೇದನ, ಬಹು ಪತ್ನಿತ್ವ, ದಾಂಪತ್ಯ ಶಿಷ್ಟಾಚಾರಗಳು,

ಹೆತ್ತವರೊಂದಿಗಿನ ಸಂಬಂಧ, ಮಕ್ಕಳೊಂದಿಗಿನ ಧೋರಣೆ, ನೆರೆಕರೆಯವರೊಡನೆ ಸಂಬಂ ಇತ್ಯಾದಿಗಳ ನೀತಿ ನಿಯಮಗಳನ್ನು ನಿರ್ಧರಿಸುವ ಪರಮಾಧಿಕಾರವು ಪ್ರಪಂಚದೊಡೆಯನಾ ಅಲ್ಲಾಹನದ್ದಾಗಿದೆ. ಇತರ ಯಾರಿಗೂ ಆ ಅಧಿಕಾರವಿಲ್ಲ. ಇದರ ಅಂಗೀಕಾರವು ತೌಹೀದ್ ಅವಿಭಾಜ್ಯ ಅಂಗವಾಗಿದೆ. ಅವು ಲೌಕಿಕ ವ್ಯವಹಾರ. ಆದ್ದರಿಂದ ಅವುಗಳನ್ನು ಮಾನವ ಸ್ವ ಹಿತಾನುಸಾರ ಪಾಲಿಸಬೇಕು. ಅದರಲ್ಲಿ ದೇವನ ಅಥವಾ ಧರ್ಮದ ಹಸ್ತಕ್ಷೇಪವಿರಬಾರದೆಂ ನಂಬುವುದು ಮತ್ತು ವಾದಿಸುವುದು ಅಲ್ಲಾಹನ ಏಕತ್ವಕ್ಕೆ ವಿರುದ್ಧವಾಗಿದ್ದು ಘೋ ತಪ್ಪಾಗಿದೆ. ಜಾತಿ-ಧರ್ಮ ಭೇದವಿಲ್ಲದೆ ಇಷ್ಟ ಬಂದ ಹೆಣ್ಣನ್ನು ಬೇಕಾದ ರೀತಿಯ ಸ್ವೀಕರಿಸಿ ಬೇಕಾದಷ್ಟು ಕಾಲ ಜತೆಯಲ್ಲಿರಿಸಬಹುದು. ಅದರಲ್ಲಿ ಧರ್ಮ ಅಥವಾ ಶರೀಅ ಹಸ್ತಕ್ಷೇಪಿಸಬಾರದೆಂಬ ವಾದವು ಅದಕ್ಕೆ ಉದಾಹರಣೆಯಾಗಿದೆ.

ಇಸ್ಲಾಮ್ ವಿವಾಹವನ್ನು ಧರ್ಮದ ಅವಿಭಾಜ್ಯ ಅಂಗವೆಂದು ಪರಿಗಣಿಸಿ ಅದನ್ನು ತಿರಸ್ಕರಿಸಿ ವಿಷಯಾಸಕ್ತಿಯ ಶಮನಕ್ಕಾಗಿ ಅನೈಸರ್ಗಿಕ ವಿಧಾನವನ್ನು ಅಂಗೀಕರಿಸಿ ಸಮಾಜವನ್ನು ಸುಧಾರಿಸಲಿಕ್ಕಾಗಿ ಪ್ರವಾದಿ ಲೂತ್‌ರನ್ನು ನೇಮಿಸಲಾಗಿತ್ತು. ಆ ಗೋತ್ರದ ಸಲಿಂಗ ರತಿ ವ್ಯಾಪಕವಾಗಿತ್ತು. ಇತಿಹಾಸದಲ್ಲಿ ಅಂತಹ ದುರ್ಮಾರ್ಗವನ್ನು ಅವಲಂಬಿಸಿ ಪ್ರಥಮ ಸಮಾಜವದು. ಅವರಿಗೆ ನೇಮಕಗೊಂಡ ಪ್ರವಾದಿ ಹೇಳಿದರು: "ಲೂತ ಜನಾಂಗವು ರಸೂಲರನ್ನು ಸುಳ್ಳಾಗಿಸಿತು. ಅವರ ಸಹೋದರ ಲೂತರು ಅವರೊಡನೆ ಹೇಳಿ ಸಂದರ್ಭವನ್ನು ಸ್ಮರಿಸಿರಿ. ನೀವು ಭಯ ಪಡುವುದಿಲ್ಲವೇ? ನಾನು ನಿಮ್ಮ ಪಾಲಿಗೆ ಓವ ಪ್ರಾಮಾಣಿಕ ಸಂದೇಶವಾಹಕನಾಗಿರುತ್ತೇನೆ. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿ ಮತ್ತು ನನ್ನನ್ನು ಅನುಸರಿಸಿರಿ. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವ ಪ್ರತಿಫಲವನು ಅಪೇಕ್ಷಿಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಿನ ಬಳಿ ಇ ನೀವು ಜಗತ್ತಿನ ಸೃಷ್ಟಿಗಳ ಪೈಕಿ ಪುರುಷರ ಬಳಿಗೆ ಹೋಗುತ್ತೀರಾ? ಮತ್ತು ನಿಮ ಪತ್ನಿಯರಲ್ಲಿ ನಿಮ್ಮ ಪ್ರಭು ನಿಮಗಾಗಿ ಸೃಷ್ಟಿಸಿರುವುದನ್ನು ಬಿಟ್ಟು ಬಿಡುತ್ತೀರಾ ವಾಸ್ತವದಲ್ಲಿ ನೀವು ಹದ ಮೀರಿದ ಜನಾಂಗವಾಗಿದ್ದೀರಿ. ಆಗ ಅವರು "ಲೂತ್, ನೀ ಈ ಮಾತುಗಳನ್ನು ತೊರೆಯದಿದ್ದರೆ ನಮ್ಮ ನಾಡಿನಿಂದ ಹೊರಕ್ಕೆ ಅಟ್ಟಲ್ಪಟ್ಟವರ ಸಾಲಿ ನೀನೂ ಸೇರುವೆ' ಎಂದರು. ಆಗ ಅವರು, 'ನಿಮ್ಮ ದುಷ್ಕೃತ್ಯಗಳಿಗಾಗಿ ಮರುಗುವವರ ನಾನೂ ಸೇರಿದ್ದೇನೆ' ಎಂದರು." (ಪವಿತ್ರ ಕುರ್‌ಆನ್,26: 160-16

ಅನಂತರ ನಾವು 'ಲೂತ'ರನ್ನು ಸಂದೇಶವಾಹಕರನ್ನಾಗಿ ಮಾಡಿ ಕಳುಹಿಸಿದೆವ ಅವರು ತಮ್ಮ ಜನಾಂಗವನ್ನುದ್ದೇಶಿಸಿ ಹೇಳಿದ ಸಂಧರ್ಭವನ್ನು ಸ್ಮರಿಸಿರಿ. 'ನೀವು ನಿಮಗಿಂ ಮುಂಚೆ ಜಗತ್ತಿನಲ್ಲಿ ಇನ್ನಾರೂ ಮಾಡದಿರುವಂಥ ಅಶ್ಲೀಲ ಕಾರ್ಯವನ್ನೆಸಗುವಷ್ಟು ಲಜ್ಜಾಹೀನರಾಗಿ ಬಿಟ್ಟಿರಾ? ನೀವು ಸ್ತ್ರೀಯರನ್ನು ಬಿಟ್ಟು ಪುರುಷರೊಂದಿಗೆ ನಿಮ

ನಾಮಾಭಿಲಾಷೆಯನ್ನು ನೀಗಿಸಿಕೊಳ್ಳುತ್ತೀರಾ? ವಾಸ್ತವದಲ್ಲಿ ನೀವು ಸ್ಪಷ್ಟ ಕದಮೀರುವವರಾಗಿರುತ್ತೀರಿ?' ಆದರೆ ಆ ಜನಾಂಗದ ಉತ್ತರ, 'ಇವರನ್ನು ನಮ್ಮ ನಾಡಿನಿಂದ ಹೊರಕ್ಕೆ ದಬ್ಬಿರಿ. ಭಾರೀ ಪರಿಶುದ್ಧರಾಗಿ ಬಿಟ್ಟಿದ್ದಾರೆ ಇವರು!' ಎಂಬುದರ ಹೊರತು ಇನ್ನೇನೂ ಆಗಿರಲಿಲ್ಲ. (ಪವಿತ್ರ ಕುರ್‌ಆನ್,7: 80-82)

ಅರ್ಥಾತ್ ಲೈಂಗಿಕ ಸದಾಚಾರವು ಪ್ರವಾದಿ ಲೂತ್(ಅ) ಅವರು ತಮ್ಮ ಜನತೆಗೆ ತಿಳಿಸಿದ ಪ್ರಮುಖ ವಿಷಯವಾಗಿತ್ತು. ಅದನ್ನು ಅವರು ಅಂಗೀಕರಿಸಲಿಲ್ಲ. ಆದ್ದರಿಂದ ಅಲ್ಲಾಹನ ಕೋಪ ಶಾಪಗಳಿಗೆ ಗುರಿಯಾಗಿ ಅವರು ಈ ಲೋಕದಲ್ಲಿ ದಂಡಿಸಲ್ಪಟ್ಟರು. 'ಲೂತರ ಜನಾಂಗವು ಎಚ್ಚರಿಕೆಗಳನ್ನು ತಿರಸ್ಕರಿಸಿತು. ಮತ್ತು ನಾವು ಅವರ ಮೇಲೆ ಕಲ್ಲಿನ ಮಳೆಗರೆಯುವಂತಹ ಬಿರುಗಾಳಿಯನ್ನು ಕಳುಹಿಸಿದೆವು. ಲೂತರ ಮನೆಯವರು ಮಾತ್ರ ಅದರಿಂದ ರಕ್ಷಿತರಾದರು. ಅವರನ್ನು ನಾವು ನಮ್ಮ ಅನುಗ್ರಹದಿಂದ ರಾತ್ರಿಯ ಅಂತಿಮ ಯಾಮದಲ್ಲಿ ಪಾರುಗೊಳಿಸಿದೆವು." (ಪವಿತ್ರ ಕುರ್‌ಆನ್,54: 33-34)

ಸಂಕ್ಷಿಪ್ತದಲ್ಲಿ ಆರ್ಥಿಕ, ಆರಾಧನಾ ರಂಗಗಳಂತೆಯೇ ಸಾಮಾಜಿಕ, ಸಾಂಸ್ಕೃತಿಕ, ನೈತಿಕ ರಂಗಗಳ ಕಾನೂನು ರಚನೆಯ ಅಧಿಕಾರವೂ ಕೇವಲ ಅಲ್ಲಾಹನಿಗೆಂದು ಅಂಗೀಕರಿಸುವುದೇ ತೌಹೀದ್. ಉದ್ಧಟತನದಿಂದ ಅದನ್ನು ನಿರಾಕರಿಸುವುದು ಘೋರ ಶಿರ್ಕ್ ಆಗಿದೆ.

## ನಡತೆಯಲ್ಲಿಯೂ

ನಮಾಝ್, ಇಸ್ಲಾಮಿನ ಪ್ರಮುಖ ಆರಾಧನಾ ಕರ್ಮವಾಗಿದೆ. ಅದರ ರಕಅತ್‌ಗಳ ಸಂಖ್ಯೆ, ರುಕೂಅ್-ಸುಜೂದ್‌ಗಳ ರೂಪ ಇತ್ಯಾದಿ ಪ್ರಮುಖ ವಿಷಯವನ್ನು ಕುರ್‌ಆನಿನಲ್ಲಿ ವಿವರಿಸಲಾಗಿಲ್ಲ. ಕುರ್‌ಆನ್ ನಾಲ್ಕು ಕಡೆಗಳಲ್ಲಿ ನಡಿಗೆಯನ್ನು ಕಲಿಸಿದೆ. ಅನಗತ್ಯವಾಗಿ ಒಂದು ಮಾತನ್ನೂ ಪ್ರಯೋಗಿಸದ ಕುರ್‌ಆನ್, ಸತ್ಯ ನಿಷೇಧಿಗಳಿಗೂ ನಾಸ್ತಿಕರಿಗೂ ನಡೆಯಲು ತಿಳಿದಿಲ್ಲ ಎಂಬ ಕಾರಣಕ್ಕಾಗಿ ಅದನ್ನು ವಿವರಿಸಿದುದಲ್ಲ. ಮೂರು ಮೂಲಭೂತ ವಿಶ್ವಾಸಗಳ ಬಗ್ಗೆ ಒತ್ತಿ ಹೇಳಿದ, ಮಕ್ಕಾದಲ್ಲಿ ಅವತೀರ್ಣಗೊಂಡ ಅಧ್ಯಾಯಗಳಲ್ಲಿ ಕುರ್‌ಆನ್ ನಡಿಗೆಯ ಕುರಿತು ಪ್ರತಿಪಾದಿಸಿರುವುದು ಗಮನಾರ್ಹ. ನಡಿಗೆಯಲ್ಲಿ ತೌಹೀದ್ ಅಭಿವ್ಯಕ್ತವಾಗಬೇಕೆಂದು ಇದು ಸೂಚಿಸುತ್ತದೆ. ಅಲ್ಲಾಹ್ ಹೇಳಿದ್ದಾನೆ: "ನೀನು ಜನರಿಂದ ಮುಖ ತಿರುಗಿಸಿ ಮಾತಾಡಬಾರದು. ಭೂಮಿಯಲ್ಲಿ ಅಹಂಕಾರದಿಂದ ನಡೆಯಬಾರದು. ಅಹಂಕಾರ ಮತ್ತು ದರ್ಪ ತೋರುವವರನ್ನು ಅಲ್ಲಾಹ್ ಮೆಚ್ಚುವುದಿಲ್ಲ."

(ಪವಿತ್ರ ಕುರ್‌ಆನ್,31: 18)

"ನಿನ್ನ ನಡಿಗೆಯಲ್ಲಿ ಸಂತುಲನೆಯನ್ನು ಪಾಲಿಸು......" (ಪವಿತ್ರ ಕುರ್‌ಆನ್,31: 18)

"ಕರುಣಾಮಯಿಯಾದ ಅಲ್ಲಾಹನ ನೈಜ ದಾಸರು ಭೂಮಿಯಲ್ಲಿ ವಿನಯದಿಂದ ನಡೆಯುವವರಾಗಿದ್ದಾರೆ." (ಪವಿತ್ರ ಕುರ್‌ಆನ್,25: 63)

"ಭೂಮಿಯಲ್ಲಿ ದರ್ಪದಿಂದ ನಡೆಯಬಾರದು. ಭೂಮಿಯನ್ನು ಒಡೆಯಲು ನಿನ ಸಾಧ್ಯವಿಲ್ಲ. ಪರ್ವತಗಳ ಉನ್ನತಿಗೆ ತಲಪಲೂ ನಿನಗೆ ಸಾಧ್ಯವಿಲ್ಲ."

(ಪವಿತ್ರ ಕುರ್‌ಆನ್,17: 3

ದೇವನ ದಾಸನೆಂಬ ಪ್ರಜ್ಞೆಯಿಂದ, ಅದರ ಅನಿವಾರ್ಯ ಬೇಡಿಕೆಯಾಗಿರುವ ವಿನಯ ನಡಿಗೆಯೇ ತೌಹೀದ್‌ನ ನಡಿಗೆಯಾಗಿದೆ. ಅಹಂಕಾರ, ಮದದ ನಡಿಗೆಯು ಶಿರ್ಕ್ ಆಗಿ "ನಿಶ್ಚಯವಾಗಿಯೂ ಮಾನವನು ಮಿತಿ ಮೀರಿದ್ದಾನೆ. ಆತ ಸ್ವಯಂ ಪರ್ಯಾಪ್ತವೆಂ ಭಾವಿಸುವುದರಿಂದ." (ಪವಿತ್ರ ಕುರ್‌ಆನ್,96: 6

## ದೇಹೇಚ್ಛೆಯ ಗುಲಾಮರು

ಕಂಡದ್ದನ್ನೆಲ್ಲಾ ತಿನ್ನುವುದು, ಕುಡಿಯುವುದು, ಬಾಯಿಗೆ ಬಂದಂತೆ ಮಾತನಾಡುವು ತೋಚಿದ್ದನ್ನು ಮಾಡುವುದು, ಇಂತಹ ವಿಷಯಗಳಲ್ಲಿ ಹಲಾಲ್-ಹರಾಮ್, ನ್ಯಾಯ ಅನ್ಯಾಯ, ಸರಿ-ತಪ್ಪುಗಳನ್ನು ಪರಿಗಣಿಸದೆ ಇರುವವರನ್ನು ಅಥವಾ ಪರಿಗಣಿಸಬೇಕೆಂ ಯಾರಾದರೂ ಹೇಳಿದರೆ ಅದನ್ನು ಲೆಕ್ಕಿಸದವರನ್ನು ಸಾಮಾನ್ಯವಾಗಿ ಸ್ವೇಚ್ಛಾಚಾರಿಗಳೆಂ ಹೇಳಲಾಗುತ್ತದೆ. ಅವರ ಜೀವನವು ದೇಹೇಚ್ಛೆಗೆ ವಿಧೇಯವಾಗಿರುತ್ತದೆ.

"ಚಿತ್ತಾಕಾಂಕ್ಷೆಯನ್ನು ತನ್ನ ದೇವನಾಗಿ ಮಾಡಿದವನ ಸ್ಥಿತಿಯ ಬಗ್ಗೆ ನೀ ಎಂದಾದರೂ ವಿವೇಚಿಸಿದ್ದೀರಾ!" (ಪವಿತ್ರ ಕುರ್‌ಆನ್,25:

"ತನ್ನ ಸ್ವೇಚ್ಛೆಗಳನ್ನೇ ತನ್ನ ದೇವರಾಗಿ ಮಾಡಿದವನ ಸ್ಥಿತಿಯ ಬಗ್ಗೆ ನೀ ಎಂದಾದರೂ ವಿವೇಚಿಸಿದ್ದೀರಾ? ಅಲ್ಲಾಹನು ಜ್ಞಾನದ ಹೊರತಾಗಿಯೂ ಆತನ ಪಥಭ್ರಷ್ಟತೆಗೆ ಎಸೆದು ಬಿಟ್ಟನು. ಅವನ ಹೃದಯ ಮತ್ತು ಕಿವಿಗಳಿಗೆ ಮುದ್ರೆ ಒತ್ತಿ ಬಿಟ್ಟ ಮತ್ತು ಅವನ ದೃಷ್ಟಿಗಳ ಮೇಲೆ ತೆರೆಯೆಳೆದು ಬಿಟ್ಟನು. ಅಲ್ಲಾಹನ ಬಳಿಕ ಅವ ಸನ್ಮಾರ್ಗ ನೀಡಲು ಇನ್ನಾರಿದ್ದಾರೆ. ನೀವು ಪಾಠ ಕಲಿಯುವುದಿಲ್ಲವೇ?"

(ಪವಿತ್ರ ಕುರ್‌ಆನ್,45:

ದೇಹೇಚ್ಛೆಗಳನ್ನು ದೇವನಾಗಿಸಿದವರನ್ನು ಕುರ್‌ಆನ್ ಆಕ್ಷೇಪಿಸಿದ್ದು ಮಾತ್ರವ ಅಂಥವರನ್ನು ಅನುಸರಿಸಬಾರದೆಂದೂ ಎಚ್ಚರಿಕೆ ನೀಡಿದೆ. ಅಲ್ಲಾಹ್ ಆಜ್ಞಾಪಿಸುತ್ತಾ "ನಮ್ಮ ಸ್ಮರಣೆಯಿಂದ ನಾವು ಅಶ್ರದ್ಧಗೊಳಿಸಿರುವಾತನನ್ನೂ ದೇಹೇಚ್ಛೆಗಳ ಅನುಸರಿಸುವವರನ್ನೂ ಮಿತಿ ಮೀರಿ ವರ್ತಿಸುವವರನ್ನೂ ನೀವು ಅನುಸರಿಸಬೇಡಿರಿ."

(ಪವಿತ್ರ ಕುರ್‌ಆನ್,18:

"ಏಕೆಂದರೆ ದೇವ ಮಾರ್ಗದರ್ಶನವಿಲ್ಲದೆ, ಸ್ವೇಚ್ಛೆಗಳನ್ನು ಹಿಂಬಾಲಿಸಿದವನಿಗಿ

ತಪ್ಪಿದವರು ಯಾರಿರಬಹುದು. ಅಲ್ಲಾಹನು ಇಂಥ ಧಿಕ್ಕಾರಿಗಳಿಗೆ ಖಂಡಿತ ಸನ್ಮಾರ್ಗ ರಿಸುವುದಿಲ್ಲ." (ಪವಿತ್ರ ಕುರ್‌ಆನ್,28: 50)

"ಯಹೂದಿಯರೂ ಕ್ರೈಸ್ತರೂ ನೀವು ಅವರ ಮಾರ್ಗವನ್ನು ಅನುಸರಿಸುವವರೆಗೂ ಬಗ್ಗೆ ಎಂದೂ ಪ್ರಸನ್ನರಾಗಲಾರರು. ಅಲ್ಲಾಹ್ ತೋರಿಸಿದ ಮಾರ್ಗದರ್ಶನವೇ ವಿಕ ಮಾರ್ಗದರ್ಶನವೆಂದು ಸ್ಪಷ್ಟವಾಗಿ ಹೇಳಿಬಿಡಿರಿ. ನಿಮ್ಮ ಬಳಿಗೆ ಬಂದಿರುವ ಜ್ಞಾನದ ಬಳಿಕವೂ ನೀವು ಅವರ ಚಿತ್ತಾಕಾಂಕ್ಷೆಗಳನ್ನನುಸರಿಸಿದರೆ ಅಲ್ಲಾಹನ ಹಿಡಿತದಿಂದ ಸಲು ಯಾವನೇ ರಕ್ಷಕ ಮಿತ್ರನಾಗಲೀ ಸಹಾಯಕನಾಗಲೀ ನಿಮಗೆ ಇರಲಾರನು." (ಪವಿತ್ರ ಕುರ್‌ಆನ್,2: 120)

"ಓ ಪೈಗಂಬರರೇ, ನೀವು ಅಲ್ಲಾಹನಿಂದ ಅವತೀರ್ಣಗೊಂಡ ಕಾನೂನಿನ ಪ್ರಕಾರ ರ ವ್ಯವಹಾರಗಳ ತೀರ್ಮಾನ ಮಾಡಿರಿ ಮತ್ತು ಇವರ ಅಭೀಷ್ಟಗಳನ್ನು ಅನುಸರಿಸಬೇಡಿರಿ." (ಪವಿತ್ರ ಕುರ್‌ಆನ್,5: 48)

ಅಲ್ಲಾಹನ ವಿಧಿ-ನಿಷೇಧಗಳನ್ನು ಪ್ರಜ್ಞಾಪೂರ್ವಕ ಧಿಕ್ಕರಿಸಿ, ಸ್ವೇಚ್ಛೆಯನ್ನು ಅನುಸರಿಸಿ ಯುವಂತಹ ಮಂದಿಯ ಆಜ್ಞಾನುವರ್ತಿಗಳಾಗುವುದು ತೌಹೀದ್‌ನ ಉಲ್ಲಂಘನೆಯಾಗಿದೆ. ಹನು ಹೀಗೆ ಹೇಳಿದ್ದಾನೆ: "ನೀವು ಅಲ್ಲಾಹನ ಆಯತ್‌ಗಳಲ್ಲಿ ವಿಶ್ವಾಸವಿರಿಸುತ್ತೀರಾದರೆ ಹನ ನಾಮ ಉಚ್ಚರಿಸಲ್ಪಟ್ಟಿರುವ ಪ್ರಾಣಿಯ ಮಾಂಸವನ್ನು ತಿನ್ನಿರಿ. ನೀವು ಅಲ್ಲಾಹನ ಉಚ್ಚರಿಸಲ್ಪಟ್ಟಿರುವ ವಸ್ತುವನ್ನು ತಿನ್ನದಿರಲು ಕಾರಣವೇನು? ನಿಜವಾಗಿ ಶಾವಸ್ಥೆಯ ಹೊರತು ಇತರ ಎಲ್ಲಾ ಸ್ಥಿತಿಗಳಲ್ಲಿಯೂ ಅಲ್ಲಾಹನು ನಿಷೇಧಿಸಿರುವ ಗಳ ವಿವರವನ್ನು ನಿಮಗೆ ತಿಳಿಸಿ ಕೊಡಲಾಗಿದೆ. ನಿಜವಾಗಿಯೂ ಹೆಚ್ಚಿನವರು ವಿಲ್ಲದೆ ಕೇವಲ ತಮ್ಮ ಅಭಿಲಾಷೆಗಳಿಂದಾಗಿ ಪಥಭ್ರಷ್ಟ ಮಾತುಗಳನ್ನಾಡುತ್ತಾರೆ. ಹದ ನಡೆಯುತ್ತಿರುವ ಇವರನ್ನು ನಿಮ್ಮ ಪ್ರಭು ಚೆನ್ನಾಗಿ ಬಲ್ಲನು. ನೀವು ಪ್ರತ್ಯಕ್ಷ ಮತ್ತು ೋಕ್ಷ ಪಾಪ ಕಾರ್ಯಗಳಿಂದ ದೂರವಿರಿ. ಪಾಪಗಳಿಸುವವರು ತಮ್ಮ ಗಳಿಕೆಯ ಪ್ರತಿಫಲ ನೇ ತೀರುವರು. ಅಲ್ಲಾಹನ ನಾಮ ಉಚ್ಚರಿಸದೆ ವಧಿಸಲ್ಪಟ್ಟ ಪ್ರಾಣಿಯ ಮಾಂಸ ನೇಡಿರಿ. ಹೀಗೆ ಮಾಡುವುದು ಧರ್ಮ ಭ್ರಷ್ಟತೆ. ನಿಮ್ಮೊಡನೆ ಜಗಳ ಮಾಡಲಿಕ್ಕಾಗಿ ನರು ತಮ್ಮ ಸಂಗಾತಿಗಳ ಮನಸ್ಸಿನಲ್ಲಿ ಸಂಶಯ ಮತ್ತು ಆಕ್ಷೇಪಣೆಗಳನ್ನು ಉಂಟು ಸುತ್ತಾರೆ. ನೀವು ಅವರ ಅನುಸರಣೆ ಸ್ವೀಕರಿಸಿದರೆ, ಖಂಡಿತವಾಗಿಯೂ ನೀವು ್ರಕರಾಗುವಿರಿ." (ಪವಿತ್ರ ಕುರ್‌ಆನ್,6: 118-121)

ಭಕ್ತಿ ಮತ್ತು ಶ್ರದ್ಧೆ ಇಲ್ಲದೆ ಸ್ವೇಚ್ಛೆಯಂತೆ ವರ್ತಿಸುವವರು ಮತ್ತು ಹಿಸುವವರೆಲ್ಲರೂ ದೇಹೇಚ್ಛೆಗಳನ್ನು ದೇವನಾಗಿಸಿದವರೆಂದು ಇಬ್ನ್ ಅಬ್ಬಾಸ್(ರ) ಪ್ರಾಯ ಪಟ್ಟಿದ್ದಾರೆ. ಅಲ್ಲಾಹನ ಹೊರತು ಕಂಡದ್ದೆಲ್ಲಾ ಆರಾಧಿಸುವವರೂ ಇತರ

ಪಾಪ ಕೃತ್ಯಗಳಲ್ಲಿ ಇಚ್ಛೆಯನ್ನು ಅನುಸರಿಸುವವರೂ ಅವರಲ್ಲಿ ಸೇರುವರೆಂದು ಅ
ಉಲ್ಲೇಖಿಸಿದ್ದಾರೆ.

(ರೂಹುಲ್ ಮಆನಿ, ಸೂರತುಲ್-ಫುರ್ಕಾನ್‌ನ 43ನೇ ಆಯತ್‌ನ ವ್ಯಾಖ

ಸೂರ್ಯ ಚಂದ್ರಗಳಿಗೆ ಸಾಷ್ಟಾಂಗವೆರಗುವವನಂತೆಯೇ ದೇಹೇಚ್ಛೆಗಳ ಗುಲಾಮ
ಬಾಳುವಾತನೂ ಕಪಟ ವಿಶ್ವಾಸಿ(ಮುನಾಫಿಕ್) ಮತ್ತು ಮುಶ್ರಿಕನೆಂದು ಹಸನ್(ರ) ಅಭಿಪ್ರಾ
ಪಟ್ಟಿದ್ದಾರೆ. (ರೂಹುಲ್ ಮಆನಿ ನೋ

ಅಲ್ಲಾಹನ ನಿಯಮಗಳನ್ನು ಪ್ರಜ್ಞಾಪೂರ್ವಕ ಧಿಕ್ಕರಿಸಿ ಸ್ವೇಚ್ಛೆಯಂತೆ ಬಾಳು
ಶಿರ್ಕ್ ಆಗಿದೆ. ಹೀಗೆ ಶಿರ್ಕ್‌ನ ವಿವಿಧ ರೂಪಗಳನ್ನು ತಿಳಿದು ಅವುಗಳಿಂದ ಮುಕ್ತ
ತೌಹೀದ್‌ನಲ್ಲಿ ಧೃಡವಾಗಿ ನಿಲ್ಲುವವರೇ ವಿಜಯಶಾಲಿಗಳು. ಸಮಗ್ರ ತೌಹೀದ್‌ನ ಪ್ರ
ಮತ್ತು ಶಿರ್ಕ್‌ನ ನಿರ್ಮೂಲನವನ್ನು ಬಲವಾಗಿ ಪ್ರತಿಪಾದಿಸುತ್ತಿರುವುದು ಇಂದಿನ ಪರಿಸ್ಥಿತಿ
ಇಸ್ಲಾಮಿ ಆಂದೋಲನದ ಉಲ್ಲೇಖನೀಯ ವೈಶಿಷ್ಟ್ಯವಾಗಿದೆ.

## ಹೊಸ ಜಗತ್ತನ್ನು ನಿರ್ಮಿಸುವ ಕ್ರಾಂತಿಕಾರೀ ವಿಶ್ವಾಸ

ಜನರು ತೌಹೀದ್ ಅಂಗೀಕರಿಸಿ ಆ ಪ್ರಕಾರ ಜೀವನ ಸಾಗಿಸಿದರೆ ಸ್ವ
ಸಿಗುವುದೆಂಬ ವಾಗ್ದಾನ ನೀಡಲಾಗಿದೆ. ಸಮಾಜವು ಆ ರೀತಿ ಮಾಡಿದರೆ ಮರಣದ ಃ
ಪರಲೋಕದಲ್ಲಿ ಸ್ವರ್ಗವೂ ಭೂಮಿಯಲ್ಲಿ ಹೊಸಲೋಕವೂ ದೊರೆಯುವುದೆಂದು ಇಸ್ಲಾ
ಭರವಸೆ ನೀಡಿದೆ. ಪ್ರವಾದಿ(ಸ) ಹೇಳಿದ್ದಾರೆ; 'ನೀವು ಲಾ ಇಲಾಹ ಇಲ್ಲಲ್ಲಾಹ್' ಎ
ಹೇಳಿರಿ. ಅರಬರೂ ಅರಬೇತರರೂ ನಿಮ್ಮ ಅಧೀನರಾಗುತ್ತಾರೆ.

ಪವಿತ್ರ ವಚನವು ಹೊಸತೊಂದು ಲೋಕವನ್ನು ಸೃಷ್ಟಿಸುತ್ತದೆ: ಎಲ್ಲಾ ರೀ
ದಾಸ್ಯಗಳಿಂದಲೂ ಮಾನವನನ್ನು ವಿಮೋಚನೆಗೊಳಿಸುತ್ತದೆ. ಅಲ್ಪಮತಿಗಳಾದ ಕೇ
ಅಪಕ್ವ ಸ್ವೇಚ್ಛೆಯಲ್ಲಿ ನಿರ್ಮಿಸಿದ ಅಕ್ರಮ, ಅನ್ಯಾಯ ಮತ್ತು ವಿಕೃತ ಸಾಮಾ
ವ್ಯವಸ್ಥೆಯನ್ನು ಆಮೂಲಾಗ್ರ ಬದಲಾಯಿಸಿ ದೇವನ್ಯಾಯ ಮತ್ತು ಸತ್ಯಧರ್ಮದ ಬುನಾದಿ
ಪುನರ್ನಿರ್ಮಿಸುತ್ತದೆ. ಮೂಢನಂಬಿಕೆ ಮತ್ತು ಅನಾಚಾರಗಳಂತೆಯೇ ಅಕ್ರಮ ವ
ಅನ್ಯಾಯಗಳನ್ನು ಅಳಿಸುತ್ತದೆ. ಸುಳ್ಳು, ಕೊಲೆ, ಸುಲಿಗೆ, ದರೋಡೆ, ಮೋಸ, ವಂಚನೆಗ
ನಿರ್ಮೂಲನಗೊಳಿಸುತ್ತದೆ. ಶಾಂತಿ ಸಮಾಧಾನದ ಸಮಾಜವನ್ನು ನಿರ್ಮಿಸುತ್ತದೆ. ಸು
ರಾಷ್ಟ್ರವನ್ನು ನಿರ್ಮಿಸುತ್ತದೆ. ಪ್ರವಾದಿಯವರು ಅದನ್ನು ಈ ರೀತಿ ಸ್ಪಷ್ಟ ಪಡಿಸಿದ

ಹಬ್ರುತ್ ಖಬ್ಬಾಬ್(ರ) ವರದಿ ಮಾಡಿದ್ದಾರೆ. ಪ್ರವಾದಿಯವರು ಪವಿತ್ರ ಕಅ
ನೆರಳಲ್ಲಿ ಹಾಸನ್ನು ದಿಂಬಾಗಿಸಿ ಮಲಗಿದ್ದರು. ಆಗ ನಾವು ಪ್ರವಾದಿಯ(ಸ) ಬಳಿ ಹೆ
ಕೋರಿದೆವು. ನಮಗಾಗಿ ತಾವು ಸಹಾಯ ಯಾಚಿಸುವುದಿಲ್ಲವೇ? ಆಗ ಅವರು ಹೇಳಿ
"ನಿಮಗಿಂತ ಮೊದಲು ಮಾನವರನ್ನು ದೊಡ್ಡ ದೊಡ್ಡ ಹೊಂಡ ತೋಡಿ ಅದ

ಕಲಾಗುತ್ತಿತ್ತು. ಅನಂತರ ಗರಗಸದಿಂದ ಇಬ್ಬಾಗವಾಗಿ ಸೀಳಲಾಗುತ್ತಿತ್ತು. ಅವರ ಮಾಂಸ ತ್ತು ಎಲುಬುಗಳನ್ನು ಕಬ್ಬಿಣದ ಬಾಚಣಿಗೆಯಿಂದ ಬಾಚಿ ಬೇರ್ಪಡಿಸಲಾಗುತ್ತಿತ್ತು. ವರೂ ಅವು ಧರ್ಮದಿಂದ ಅವರನ್ನು ದೂರ ಸರಿಸಲಿಲ್ಲ. ಅಲ್ಲಾಹನಾಣೆ! ಈ ಕಾರ್ಯವನ್ನು ಲ್ಲಾಹನು ಖಂಡಿತ ಪರಿಪೂರ್ಣಗೊಳಿಸುವನು. ಸನ್‌ಆದಿಂದ ಹಝ್ರುರ್ ಮೌತ್ ತನಕ ಲ್ಲಾಹ್ ಮತ್ತು ಆಡನ್ನು ಹಿಡಿಯುವ ತೋಳದ ಹೊರತು ಬೇರೆ ಯಾರ ಭಯವೂ ಲ್ಲದೆ ಯಾತ್ರಾ ತಂಡವು ಸಂಚರಿಸುವಷ್ಟರ ಮಟ್ಟಿಗೆ! ಆದರೆ ನೀವು ಅವಸರ ಪಡುತ್ತಿರುವಿರಿ." (ಬುಖಾರಿ)

ಇದರ ಅರ್ಥ ಬಹಳ ವ್ಯಕ್ತ. ನೀವು ಈ ಹಿಂಸೆಯನ್ನು ಸಹಿಸಬೇಕು. ಪರೀಕ್ಷೆಗಳನ್ನು ನುಭವಿಸಲೇ ಬೇಕು. ಬಹುಶಃ ಇದಕ್ಕಿಂತ ಅಧಿಕವೂ ಅನುಭವಿಸಬೇಕಾದೀತು. ಏಕೆಂದರೆ ುಯ ಅತ್ಯುನ್ನತವಾಗಿದೆ. ಅದು ಹೊಸ ಲೋಕದ ನಿರ್ಮಾಣ ಕಾರ್ಯವಾಗಿದೆ. ಆದ್ದರಿಂದ ಸೆ ಅನುಭವಿಸ ಬೇಕಾದುದು ಅನಿವಾರ್ಯ.

ಪವಿತ್ರ ವಚನವು ಶೋಷಣೆಗಳನ್ನು ಕೊನೆಗೊಳಿಸುತ್ತದೆ. ಶೋಷಿತರನ್ನು ವಿಮೋಚನೆ ಳಿಸುತ್ತದೆ. ಮಾನವ ದಾಸ್ಯದಿಂದ ಮಾನವನನ್ನು ವಿಮೋಚನೆಗೊಳಿಸುತ್ತದೆ. ಇಸ್ಲಾಮಿ ಮಾಜದ ಪ್ರತಿನಿಧಿಯಾಗಿ ಪರ್ಶಿಯನ್ ದಂಡನಾಯಕ ರುಸ್ತುಮ್‌ನನ್ನು ಭೇಟಿಯಾದ ೀಲ್ ಬಿನ್ ಆಮಿರ್‌ರೊಡನೆ ಅವರ ಆಗಮನೋದ್ದೇಶವನ್ನು ಕೇಳಿದಾಗ ಅವರು ಡಿದ ಉತ್ತರದಲ್ಲಿ ಹೀಗೆ ಸ್ಪಷ್ಟ ಪಡಿಸಿದರು. ಅಲ್ಲಾಹನೇ ನಮ್ಮನ್ನು ನೇಮಿಸಿದ್ದಾನೆ. ಮ್ಮ ಧ್ಯೇಯವು, ಅಲ್ಲಾಹನಿಚ್ಛಿಸಿದವರನ್ನು ದಾಸರ ದಾಸ್ಯದಿಂದ ಕೇವಲ ಆತನ ದಾಸ್ಯಕ್ಕೆ, ಂಕ ಜೀವನದ ಇಕ್ಕಟ್ಟಿನಿಂದ ಇಹ ಪರಲೋಕಗಳ ವಿಶಾಲತೆಗೆ, ಪ್ರಚಲಿತ ಪದ್ಧತಿಗಳ ್ಯಾಯದಿಂದ ಇಸ್ಲಾಮಿನ ನ್ಯಾಯದೆಡೆಗೆ ಸಾಗಿಸುವುದಾಗಿದೆ.

## ುಖ್ಯ ಪ್ರತಿಸ್ಪರ್ಧಿಗಳು

ತೌಹೀದ್ ಎಲ್ಲಾ ಕಪಟ ದೇವರುಗಳ ವಿರುದ್ಧ ಸಮರ ಘೋಷಣೆಯಾಗಿದೆ. ಲ್ಲಾಹನ ಹಕ್ಕು-ಅಧಿಕಾರಗಳನ್ನು ಅನ್ಯಾಯವಾಗಿ ಸ್ವಾಧೀನ ಪಡಿಸಿದ ಅತಿಕ್ರಮಿಗಳ ವಿರುದ್ಧ ೋರಾಡುವ ಕ್ರಮವನ್ನು ಅದು ಒಳಗೊಂಡಿದೆ. ಆದ್ದರಿಂದ ಪರಮಾಧಿಕಾರದ ಸೋಗಿನಿಂದ ತಿಮೀರಿ ವರ್ತಿಸುವವರೆಲ್ಲರೂ ಪವಿತ್ರ ವಚನ ಮತ್ತು ಅದರ ವಕ್ತಾರರ ಪ್ರತಿಸ್ಪರ್ಧಿ ಾಗುತ್ತಾರೆ. ಅವರು ಅದರ ವಿರುದ್ಧ ರಂಗಕ್ಕಿಳಿಯುತ್ತಾರೆ. ಕುರ್‌ಆನನ್ನು ಪರಿಚಯಗೊಳಿಸಿದ ವಾದಿಯವರನ್ನು(ಸ) ವಿರೋಧಿಸಿದ ದುಶ್ಶಕ್ತಿಗಳನ್ನು ಪರಿಶೀಲಿಸಿದರೆ ಇದು ಸ್ಪಷ್ಟವಾಗುತ್ತದೆ.

ಅಲ್ಲಾಹನಿಗೆ ಮಾತ್ರ ಮಾನವರ ಮೇಲೆ ಪರಮಾಧಿಕಾರವಿರುವುದೆಂಬ ಪ್ರವಾದಿಗಳ ೋಷಣೆಯನ್ನು, ಜನರನ್ನು ತಮ್ಮ ಅಜ್ಞಾನುವರ್ತಿಗಳಾಗಿ ಮಾಡಿ ಅಧಿಕಾರ ನಡೆಸುತ್ತಿದ್ದ ್ಯರು ಮತ್ತು ನಾಯಕರು ಒಪ್ಪಲಿಲ್ಲ. ತಮ್ಮ ಪರಮಾಧಿಕಾರವು ಕಳೆದು ಹೋದೀತೆಂಬ

ಭೀತಿಯು ಅವರ ಸನ್ಮಾರ್ಗ ಸ್ವೀಕಾರಕ್ಕೆ ಅಡ್ಡಿಯಾಗಿತ್ತು. ಇಂತಹ ವ್ಯಕ್ತಿಗಳು ಮ ಶಕ್ತಿಗಳೇ ಎಲ್ಲಾ ಪ್ರವಾದಿಗಳ ಮುಖ್ಯ ಪ್ರತಿಸ್ಪರ್ಧಿಗಳಾಗಿದ್ದರು.

ಪ್ರವಾದಿ ನೂಹ್‌ರ(ಅ) ವಿರೋಧಿಗಳ ಕುರಿತು ಕುರ್‌ಆನ್ ಹೀಗೆ ಹೇ "ನೂಹ್‌ರನ್ನು ನಾವು ಅವರ ಜನಾಂಗದ ಬಳಿಗೆ ಕಳುಹಿಸಿದೆವು. ಅವರು ಹೇಳಿದರು: ಜನರೇ, ನೀವು ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಆತನ ಹೊರತು ನಿಮಗೆ ಆರಾಧ್ಯರಿಲ್ಲ. ಒಂದು ಭಯಾನಕ ಶಿಕ್ಷೆ ನಿಮಗೆ ಬಂದೆರಗೀತೆಂದು ನಾನು ಭಯ ಪಡುತ್ತೆ ಆಗ ಆ ಜನಾಂಗದ ಗಣ್ಯರು ಹೇಳಿದರು, ನೀವು ಸ್ಪಷ್ಟ ಪಥಭ್ರಷ್ಟತೆಯಲ್ಲಿರುವಿರೆ ನಮಗೆ ತೋರುತ್ತಿದೆ." (ಪವಿತ್ರ ಕುರ್‌ಆನ್,7: 59

ಪ್ರವಾದಿ ಹೂದ್‌ರನ್ನು(ಅ) ಯಾರು ವಿರೋಧಿಸಿದ್ದರೆಂದು ಕುರ್‌ಆನ್ ಸ್ಪಷ್ಟ ಪಡಿ

"ನಾವು 'ಆದ್'ರ (ಜನಾಂಗದವರ) ಕಡೆಗೆ ಅವರ ಸೋದರ ಹೂದರ ಕಳುಹಿಸಿದೆವು. ಅವರು ಹೇಳಿದರು: 'ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾ ಆರಾಧನೆ ಮಾಡಿರಿ. ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನಿ ದೇವಭಯವಿರಿಸಿಕೊಳ್ಳುವುದಿಲ್ಲವೇ?' ಅವರ ಜನಾಂಗದ ಸತ್ಯನಿಷೇಧಿ ಮುಂದಾಳುಗ 'ನಾವು ನಿನ್ನನ್ನು ತಿಳಿಗೇಡಿಯಾಗಿ ಕಾಣುತ್ತೇವೆ. ನೀನು ಸುಳ್ಳುಗಾರನೆಂದು ಭಾವಿಸುತ್ತೆ ಎಂದರು." (ಪವಿತ್ರ ಕುರ್‌ಆನ್,7: 65

ಪ್ರವಾದಿ ಸಾಲಿಹ್‌ರ(ಅ) ಕುರಿತು ಅಲ್ಲಾಹನು ತಿಳಿಸಿದ್ದಾನೆ: "ಸಮೂದ್ ಜನಾಂಗದ ಬಳಿಗೆ ನಾವು ಅವರ ಸಹೋದರ ಸಾಲಿಹರನ್ನು ಕಳುಹಿಸಿದೆವು. ಅವರು ಹೇಳಿದರು: ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ನಿ ಆರಾಧ್ಯನಾರೂ ಇಲ್ಲ'. ಅವರ ಜನಾಂಗದ ದುರಹಂಕಾರಿ ನಾಯಕರು ವಿಶ್ವಾಸವಿರಿ ದುರ್ಬಲ ವರ್ಗದವರೊಡನೆ ಹೇಳಿದರು: 'ಸಾಲಿಹರು ತಮ್ಮ ಪ್ರಭುವಿನ ಸಂದೇಶವಾಹ ಆಗಿರುವರೆಂದು ನೀವು ನಿಜಕ್ಕೂ ಅರಿತಿರುವಿರಾ?' ಅವರು ಹೀಗೆ ಉತ್ತರಿಸಿದ 'ನಿಶ್ಚಯವಾಗಿಯೂ ಅವರು ಯಾವ ಸಂದೇಶ ಸಹಿತ ಕಳುಹಿಸಲ್ಪಟ್ಟಿರುವರೋ ಅದ ನಾವು ನಂಬುತ್ತೇವೆ' ಆಗ ದುರಹಂಕಾರಿಗಳು ಹೇಳಿದರು, 'ನಿಶ್ಚಯವಾಗಿಯೂ ನಿ ಯಾವುದರಲ್ಲಿ ವಿಶ್ವಾಸವಿರಿಸಿರುವಿರೋ ನಾವು ಅದನ್ನು ನಿರಾಕರಿಸುವವರಾಗಿದ್ದೇವೆ"

(ಪವಿತ್ರ ಕುರ್‌ಆನ್,7: 73

ಪ್ರವಾದಿ ಶುಐಬ್‌ರ(ಅ) ಜನತೆಯ ಅವಿಶ್ವಾಸಿಗಳೇ ಮುಂದಾಳುಗಳೇ ಆಗಿದ್ದ ತಮ್ಮ ಹಿರಿಮೆಯ ದರ್ಪದಿಂದ ಅವರ ಜನಾಂಗದ ಮುಂದಾಳುಗಳು ಅವರೊಡನೆ ಹ ಹೇಳಿದರು: "ಓ ಶುಐಬ್, ನಾವು ನಿಮ್ಮನ್ನೂ ನಿಮ್ಮೊಂದಿಗೆ ವಿಶ್ವಾಸವಿಟ್ಟವರನ್ನೂ ನ ನಾಡಿನಿಂದ ಹೊರಕ್ಕಟ್ಟುವೆವು. ಅನ್ಯಥಾ ನೀವು ನಮ್ಮ ಕೂಟಕ್ಕೆ ಮರಳಿ ಬರಬೇಕಾದೀ

(ಪವಿತ್ರ ಕುರ್‌ಆನ್,7:

ಪ್ರವಾದಿಗಳೆಲ್ಲರೂ ನೀವು ಕೇವಲ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ, ಆತನ ೊರತು ನಿಮಗೆ ಅನ್ಯ ಆರಾಧ್ಯರಿಲ್ಲವೆಂದು ಇಸ್ಲಾಮಿ ವಿಶ್ವಾಸವನ್ನು ಸಾರಿದಾಗ, ಆಯಾ ನಾಂಗದ ಮುಂದಾಳುಗಳೇ ಅದರ ವಿರುದ್ಧ ರಂಗಕ್ಕಿಳಿದಿದ್ದರು. ಯಾಕೆಂದರೆ, ಅದು ಅವರ ್ವಾರ್ಥ ಹಿತಾಸಕ್ತಿಗಳಿಗೆ ಅಡ್ಡಿಯಾಗಿತ್ತು. ಅವರ ಪರಮಾಧಿಕಾರದ ನಿರಾಕರಣೆಯಾಗಿತ್ತು. ್ರವಾದಿಗಳ ತೌಹೀದ್ ಘೋಷಣೆಯು ಅವರ ಅಧಿಪತ್ಯದ ನಿರಾಕರಣೆಯಾಗಿತ್ತು. ಪ್ರವಾದಿ ಬ್ರಾಹೀಮ್‌ರನ್ನು(ಅ) ವಿರೋಧಿಸಿದ ನಮ್ರೂದ್ ಮತ್ತು ಪ್ರವಾದಿ ಮೂಸಾರನ್ನು(ಅ) ರೋಧಿಸಿದ ಫರೋವ ಚಕ್ರವರ್ತಿಗಳು ಪ್ರವಾದಿಗಳ ಸಂದೇಶದಲ್ಲಿ ತಮ್ಮ ಅಧಿಕಾರ ಕ್ಯಗಳ ನಿರಾಕರಣೆಯಿದೆಯೆಂದು ಚೆನ್ನಾಗಿ ಅರಿತಿದ್ದರು. ನಾವು ಘೋಷಿಸುತ್ತಿರುವ ಧಾರ್ಮಿಕ, ರ್ಥಿಕ, ರಾಜಕೀಯ ವ್ಯವಸ್ಥೆಯು ಕುಸಿದು ಬೀಳುವುದೆಂಬ ಭೀತಿಯು ಅವರನ್ನು ಇಸ್ಲಾಮಿನ ್ರಧಾನ ವೈರಿಯಾಗಿ ಮಾರ್ಪಡಿಸಿತ್ತು. ಈ ಕಾರಣದಿಂದಾಗಿಯೇ ಯಾವಾಗಲೂ ಎಲ್ಲೆಡೆಯೂ ೀಹೇಚ್ಛೆಯ ದಾಸರಾಗಿ ಸ್ವಚ್ಛಂದ ಸುಖ ಲೋಲುಪರಾಗಿ ಬಾಳುವ ಮಂದಿಯೇ ಸತ್ಯದ ರುದ್ಧ ಸಕ್ರಿಯರಾಗುತ್ತಾರೆ.

ಅಲ್ಲಾಹನು ತಿಳಿಸಿರುತ್ತಾನೆ: "ನಾವು ಯಾವುದಾದರೊಂದು ನಾಡಿಗೆ ಎಚ್ಚರಿಕೆ ುಡುವವರನ್ನು ಕಳಿಸಿದಾಗಲೆಲ್ಲಾ ಆ ನಾಡಿನ ಸ್ಥಿತಿವಂತರು 'ನೀವು ತಂದಿರುವ ಸಂದೇಶವನ್ನು ಾವು ಸ್ವೀಕರಿಸುವುದಿಲ್ಲ' ಎಂದು ಹೇಳದೆ ಇರಲಿಲ್ಲ. ನಾವು ನಿಮಗಿಂತ ಹೆಚ್ಚು ಸಂತತಿಗಳನ್ನೂ, ಂಪತ್ತನ್ನೂ ಹೊಂದಿದ್ದೇವೆ. ನಾವು ಎಂದಿಗೂ ಶಿಕ್ಷೆ ಹೊಂದುವವರಲ್ಲವೆಂದೇ ಅವರು ಪ್ರತಿ ಬವೂ ಹೇಳಿದ್ದರು." (ಪವಿತ್ರ ಕುರ್‌ಆನ್,34: 34-35)

ಅಂತಹ ಮಂದಿಯ ಅಕ್ರಮಗಳು ಜನ ಸಮೂಹಗಳ ಸರ್ವ ನಾಶಕ್ಕೆ ಹೇತುವಾಗುತ್ತದೆ. ನಾವು ಒಂದು ನಾಡನ್ನು ನಾಶಗೊಳಿಸಲಿಚ್ಛಿಸಿದಾಗ ಅದರ ಸ್ಥಿತಿವಂತರಿಗೆ ಅಪ್ಪಣೆ ಕೊಡುತ್ತೇವೆ ುತ್ತು ಅವರು ಅದರಲ್ಲಿ ಆಜ್ಞೋಲ್ಲಂಘನೆ ಮಾಡ ತೊಡಗುತ್ತಾರೆ. ಆಗ ಯಾತನೆಯ ೀರ್ಮಾನವು ಆ ನಾಡಿಗೆ ಅನ್ವಯವಾಗಿ ಬಿಡುತ್ತದೆ. ಮತ್ತು ನಾವು ಅದನ್ನು ಸಂಪೂರ್ಣ ಾಶ ಮಾಡಿ ಬಿಡುತ್ತೇವೆ." (ಪವಿತ್ರ ಕುರ್‌ಆನ್,17: 16)

## ಿವಿತ್ರ ವಚನದ ವಿವರಣೆ

ಇಸ್ಲಾಮಿನ ಬದ್ಧ ವೈರಿಗಳಾಗಿದ್ದ ಪಾಶ್ಚಾತ್ಯ ಸಾಮ್ರಾಜ್ಯ ಶಕ್ತಿಗಳು ಮುಸ್ಲಿಮ್ ಾಷ್ಟ್ರಗಳನ್ನು ಸ್ವಾಧೀನ ಪಡಿಸಿ ಸುದೀರ್ಘ ಕಾಲ ಆದಿಪತ್ಯ ನಡೆಸಿದ್ದವು. ಅವರ ಯೋಜಿತ ುತ್ತು ನಿರಂತರ ಪ್ರಯತ್ನಗಳಿಂದ ಸಮಾಜದ ತೌಹೀದ್ ಕಲ್ಪನೆಗೆ ತೀವ್ರ ಹಾನಿ ತಟ್ಟಿತು. ುಮ ಇಸ್ಲಾಮಿ ಜೀವನದ ಕೇಂದ್ರ ಬಿಂದುವೆಂಬ ಸಮಗ್ರ ದೃಷ್ಟಿಕೋನ ನಷ್ಟವಾಯಿತು. ಮಗ್ರ ಕ್ರಾಂತಿಯ ಮೂಲ ವಿಶ್ವಾಸವೆಂಬ ಸ್ಥಿತಿ ಮರೆಯಾಯಿತು. ಹೊಸ ಜಗತ್ತನ್ನು ಕಟ್ಟುವ ್ರಾಂತಿಕಾರಿ ವಚನವೆಂಬ ಪ್ರಜ್ಞೆಯು ಸೋರಿ ಹೋಯಿತು. ಅದು ಆರಾಧನಾ ರಂಗಕ್ಕೆ

ಸೀಮಿತವಾಯಿತು. ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿ ಆಧುನಿಕ ಇಸ್ಲಾಮಿ ಆಂದೋಲನ 'ಲಾ ಇಲಾಹ ಇಲ್ಲಲ್ಲಾಹ್' ಎಂಬ ಪವಿತ್ರ ವಚನವನ್ನು ಅದರ ಪೂರ್ಣ ಅರ್ಥ ವ್ಯಾ ಯೊಂದಿಗೆ ಜಗತ್ತಿಗೆ ಪರಿಚಯಿಸಿದವು. ಮರೆತು ಹೋದ ಅಂಶಗಳಿಗೆ ಪುನಃ ಒತ್ತು ನೀಡಿದ ಜಮಾಅತೆ ಇಸ್ಲಾಮಿಯ ಸಂವಿಧಾನದಲ್ಲಿ ವಿಶ್ವಾಸದ ವಿವರಣೆಯ ಭಾಗವನ್ನು ನೋಡಿ ಈ ವಿಷಯ ಯಾರಿಗೂ ಸುಲಭದಲ್ಲಿ ಮನವರಿಕೆಯಾಗುತ್ತದೆ. ಅದರಲ್ಲಿ ಹೀಗೆ ಹೇಳ

ಈ ವಿಶ್ವಾಸದ ಪ್ರಥಮ ಭಾಗದ, ಅಂದರೆ, ಅಲ್ಲಾಹನೇ ಏಕ ಇಲಾಹ್ ಎಂಬು ಹಾಗೂ ಇನ್ನಾರೂ 'ಇಲಾಹ್' ಇಲ್ಲ ಎಂಬುದರ ತಾತ್ಪರ್ಯ ಹೀಗಿದೆ. ಯಾವಾತನು ನ ಹಾಗೂ ಅಖಿಲ ಲೋಕದ ಸೃಷ್ಟಿಕರ್ತನೂ ಪರಿಪಾಲಕನೂ ನಿಯಂತ್ರಕನೂ ಒಡೆಯ ನಿಸರ್ಗ ನಿಯಮಗಳ ಕರ್ತನೂ ಆಗಿರುವನೋ ಆ ಅಲ್ಲಾಹನೇ ವಾಸ್ತವದಲ್ಲಿ ನಮ್ಮ ಸಾಕ್ಷಾತ್ ಆರಾಧ್ಯನೂ ವಿಧಾಯಕನೂ ಆರಾಧನೆಗೆ ಅರ್ಹನೂ ಆಗಿರುವನು. ಯಥಾರ್ಥ ಅನುಸರಿಸಲ್ಪಡಬೇಕಾದವನು ಕೇವಲ ಅವನೇ ಆಗಿರುವನು. ಪ್ರಸ್ತುತ ಯಾವೊ ನೆಲೆಯಲ್ಲಿಯೂ ಅವನಿಗೆ ಯಾರೂ ಭಾಗೀದಾರರಿಲ್ಲ.

ಈ ವಾಸ್ತವಿಕಾಂಶವನ್ನು ತಿಳಿದು ಅಂಗೀಕರಿಸುವುದರಿಂದ (ಮಾನವನು) ಕಡ್ಡಾ ವಾಗಿಯೂ;

1. ಅಲ್ಲಾಹನ ಹೊರತು ಯಾರನ್ನೂ ರಕ್ಷಕ, ಬೇಡಿಕೆಗಳನ್ನು ಈಡೇರಿಸುವ ಸಂಕಷ್ಟಗಳನ್ನು ನೀಗಿಸುವವ, ಪ್ರಾರ್ಥನೆಗಳನ್ನು ಆಲಿಸುವವ, ಸಹಾಯ ಮಾಡುವವ ಮ ಬೆಂಬಲಿಗ ಎಂದು ಗ್ರಹಿಸಬಾರದು. ಯಾಕೆಂದರೆ, ಬೇರೆ ಯಾರ ಹಸ್ತದಲ್ಲಿಯೂ ಯಥಾರ್ಥ ಯಾವುದೇ ಅಧಿಕಾರ ಶಕ್ತಿ ಇಲ್ಲ.

2. ಅಲ್ಲಾಹನ ಹೊರತು ಯಾರನ್ನೂ ಲಾಭ-ನಷ್ಟಗಳನ್ನು ಉಂಟು ಮಾಡಬಲ್ಲವರೆ ಭಾವಿಸಬಾರದು. ಯಾರೊಂದಿಗೂ ಭಕ್ತಿ ತೋರಬಾರದು. ಯಾರಿಗೂ ಭಯ ಪಡಬಾರ ಯಾರನ್ನೂ ಆಶ್ರಯಿಸಬಾರದು. ಯಾರಿಂದಲೂ ಏನನ್ನೂ ನಿರೀಕ್ಷಿಸಬಾರದು. ಯಾಕೆಂ ಅಲ್ಲಾಹನೇ ಸಕಲ ಅಧಿಕಾರಗಳ ಒಡೆಯನಾಗಿರುವನು.

3. ಅಲ್ಲಾಹನ ಹೊರತು ಯಾರನ್ನೂ ಆರಾಧಿಸಬಾರದು. ಯಾರ ಹೆಸರಲ್ಲಿಯ ಹರಕೆ ಇಡಬಾರದು. ಯಾರ ಮುಂದೆಯೂ ತಲೆಬಾಗಬಾರದು. ಸಂಕ್ಷಿಪ್ತದ ಬಹುದೇವರಾಧಕರು ಅವರ ಆರಾಧ್ಯರೊಡನೆ ಮಾಡುವಂತಹ ಯಾವುದೇ ವ್ಯವಹಾರವ ಯಾರೊಂದಿಗೂ ಮಾಡಬಾರದು. ಯಾಕೆಂದರೆ ಅಲ್ಲಾಹನು ಮಾತ್ರ ಆರಾಧನೆಗೆ ಅರ್ಹ

4. ಅಲ್ಲಾಹನ ಹೊರತು ಇನ್ನಾರೊಡನೆಯೂ ಪ್ರಾರ್ಥಿಸಬಾರದು, ಇನ್ನಾರೊಡನೆಯ ಅಭಯ ಯಾಚಿಸಬಾರದು. ಇನ್ನಾರನ್ನೂ ಸಹಾಯಕ್ಕಾಗಿ ಕರೆಯಬಾರದು, ಯಾರ ಕುರಿ ಅವರು ದೈವಿಕ ವ್ಯವಸ್ಥೆಯಲ್ಲಿ ಹಸ್ತಕ್ಷೇಪಿಸಬಲ್ಲ ಸಾಮರ್ಥ್ಯವುಳ್ಳವರೆಂದೂ ಅವರ ಶಿಫಾರ

ಮೂಲಕ ದೇವವಿಧಿಯನ್ನು ಬದಲಾಯಿಸಬಹುದೆಂದೂ ಪರಿಗಣಿಸಬಾರದು. ಯಾಕೆಂದರೆ ಲ್ಲರೂ ಅಲ್ಲಾಹನ ಸಾಮ್ರಾಜ್ಯದಲ್ಲಿ ಅಧಿಕಾರವಿಲ್ಲದ ಪ್ರಜೆಗಳು ಮಾತ್ರ. ಅದು ೀವಚರರಾಗಲಿ, ಪ್ರವಾದಿಗಳಾಗಿರಲಿ ಅಥವಾ ಔಲಿಯ (ಸಂತರು) ಆಗಿರಲಿ.

5. ಅಲ್ಲಾಹನ ಹೊರತು ಇನ್ನಾರನ್ನೂ ಸಾರ್ವಭೌಮ ಹಾಗೂ ಪರಮಾಧಿಕಾರಿ ಎಂದು ರಿಗಣಿಸಬಾರದು. ಸ್ವತಃ ಇಚ್ಛೆಯಂತೆ ವಿಧಿಸುವ ಮತ್ತು ನಿಷೇಧಿಸುವ ಅಧಿಕಾರವುಳ್ಳವನಾಗಿ ಯಾರನ್ನೂ ಅಂಗೀಕರಿಸಬಾರದು. ಇನ್ನಾರನ್ನೂ ಸ್ವತಂತ್ರ ಕಾನೂನು ನಿರ್ಮಾಪಕ ಮತ್ತು ರೀಅತ್ ನಿರ್ಮಾಪಕನಾಗಿ ಅಂಗೀಕರಿಸಬಾರದು. ಏಕ ಅಲ್ಲಾಹನಿಗೆ ಮತ್ತು ಅವನ ಾನೂನಿಗೆ ಬದ್ಧವಲ್ಲದ ಎಲ್ಲಾ ಅನುಸರಣೆಗಳನ್ನೂ ನಿರಾಕರಿಸಬೇಕು. ಯಾಕೆಂದರೆ ತನ್ನ ಗತ್ತಿನ ಏಕೈಕ ನೈಜ ಒಡೆಯನೂ ನೈಜ ನ್ಯಾಯಾಧಿಪತಿಯೂ ಅಲ್ಲಾಹನೇ ಆಗಿರುವನು. ಡೆತನ ಮತ್ತು ಕಾನೂನು ನಿರ್ಮಾಣದ ಹಕ್ಕು ಯಥಾರ್ಥದಲ್ಲಿ ಅವನ ಹೊರತು ಇನ್ನಾರಿಗೂ ಲ್ಲ.

ಅಷ್ಟೇ ಅಲ್ಲ ಈ ಮೂಲಭೂತ ವಿಶ್ವಾಸವನ್ನು ಅಂಗೀಕರಿಸುವುದರಿಂದ ಡ್ಡಾಯವಾಗಿಯೂ ಮಾನವನು:

6. ತನ್ನ ಸ್ವಾಯತ್ತತೆಯನ್ನು ತ್ಯಜಿಸಬೇಕು. ಸ್ವೇಚ್ಛೆಯ ಗುಲಾಮನಾಗದೆ, ತಾನು ಏಕ ಲಾಹ್ ಎಂದು ಒಪ್ಪಿ ಅಂಗೀಕರಿಸಿದ ಅಲ್ಲಾಹನಿಗೆ ಮಾತ್ರ ದಾಸನಾಗಿ ಜೀವಿಸಬೇಕು.

7. ತನ್ನನ್ನು ಯಾವುದೇ ವಸ್ತುವಿನ ಸ್ವತಂತ್ರ ಒಡೆಯನೆಂದು ಭಾವಿಸಬಾರದು. ತನ್ನ ಪ್ರಾಣ, ಅಂಗಾಂಗಗಳು, ಮಾನಸಿಕ ಮತ್ತು ದೈಹಿಕ ಸಾಮರ್ಥ್ಯಗಳು ಕೂಡಾ ಅಲ್ಲಾಹನ ಡೆತನಕ್ಕೆ ಸೇರಿದ್ದು ಅವು ಆತನ 'ಅಮಾನತ್' (ವಿಶ್ವಸ್ಥ ನಿಧಿ) ಆಗಿವೆ ಎಂದು ಪರಿಗಣಿಸಬೇಕು.

8. ತಾನು ಅಲ್ಲಾಹನ ಮುಂದೆ ಹೊಣೆಗಾರನೆಂದೂ ಜವಾಬ್ದಾರನೆಂದೂ ಭಾವಿಸಬೇಕು. ನ್ನ ಸಾಮರ್ಥ್ಯಗಳ ಬಳಕೆ, ತನ್ನ ವ್ಯವಹಾರ ಮತ್ತು ವರ್ತನೆಗಳಲ್ಲೆವುಗಳ ಬಗ್ಗೆಯೂ ಅಂತ್ಯ ನದಲ್ಲಿ ಅಲ್ಲಾಹನ ಮುಂದೆ ವಿಚಾರಣೆಗೊಳಪಡಬೇಕಾಗಿದ್ದು ತನ್ನ ಕರ್ಮಗಳ ಸತ್ಫಲ ಥವಾ ದುಷ್ಫಲಗಳನ್ನು ಅನುಭವಿಸಬೇಕಾಗುವುದೆಂಬ ವಾಸ್ತವಿಕತೆಯನ್ನು ಗಮನದಲ್ಲಿಡಬೇಕು.

9. ಅಲ್ಲಾಹನ ಮೆಚ್ಚುಗೆಯನ್ನು ತನ್ನ ಮೆಚ್ಚುಗೆಗೆ ಮತ್ತು ಅಲ್ಲಾಹನ ಅತೃಪ್ತಿಯನ್ನು ನ್ನ ಅತೃಪ್ತಿಗೆ ಮಾನದಂಡವಾಗಿ ಅಂಗೀಕರಿಸಬೇಕು.

10. ಅಲ್ಲಾಹನ ಸಂಪ್ರೀತಿ ಮತ್ತು ಸಾಮಿಪ್ಯವನ್ನು ತನ್ನ ಸರ್ವ ಪ್ರಯತ್ನಗಳ ುರಿಯಾಗಿಯೂ ಸಂಪೂರ್ಣ ಜೀವನದ ಲಕ್ಷ್ಯವಾಗಿಯೂ ಮಾಡಬೇಕು.

11. ತನ್ನ ಸ್ವಭಾವ ಮತ್ತು ನಡವಳಿಕೆಗಳಲ್ಲಿ, ಸಾಮಾಜಿಕ ಮತ್ತು ನಾಗರಿಕ ಂಬಂಧಗಳಲ್ಲಿ, ಆರ್ಥಿಕ ಮತ್ತು ರಾಜಕೀಯ ವ್ಯವಹಾರಗಳಲ್ಲಿ, ಹೀಗೆ ಜೀವನದ ಎಲ್ಲಾ ಂಗಗಳಲ್ಲಿಯೂ ಅಲ್ಲಾಹನ ಮಾರ್ಗದರ್ಶನವನ್ನು ಮಾತ್ರ ಅಂಗೀಕರಿಸಬೇಕು. ಅಲ್ಲಾಹನು

ನಿಶ್ಚಯಿಸಿ ಕೊಟ್ಟ, ಅಥವಾ ಅವನ ನಿಯಮ ನಿರ್ದೇಶಗಳಿಗೆ ಅಧೀನವಾದ ಜೀವ ವಿಧಾನವನ್ನು ಅಂಗೀಕರಿಸಬೇಕು. ಅವನ ಶರೀಅತ್‌ಗೆ(ಧರ್ಮಶಾಸ್ತ್ರ) ವಿರುದ್ಧವಾದ ಎಲ್ಲವನು ತ್ಯಜಿಸಬೇಕು.

## ಸ್ವಾತಂತ್ರ್ಯದ ಹೊಸ ಲೋಕ

ಮೂಢನಂಬಿಕೆ ಮತ್ತು ಅನಾಚಾರಗಳು ಮಾನವ ಮನಸ್ಸನ್ನು ಸ್ವಾಧೀನ ಪಡಿಸುತ್ತ ಅಚೇತನ ವಸ್ತುಗಳನ್ನು ಬಹುತೇಕ ಆರಾಧಿಸಲಾಗುತ್ತದೆ. ಪ್ರತಿಮೆ, ವಿಗ್ರಹ, ಮಹಾಪುರುಷ ಹೆಚ್ಚಾಗಿ ಪೂಜಿಸಲ್ಪಡುತ್ತಾರೆ. ಅಕ್ರಮ-ಅನ್ಯಾಯ ಆಧಿಪತ್ಯ ನಡೆಸುತ್ತದೆ. ಅಧರ್ಮ-ಅರಾಜಕ ಮೆರೆದಾಡುತ್ತದೆ. ಹುಚ್ಚೆದ್ದು ಕೊಲೆ - ಶೋಷಣೆ ಮಾಡುವವರು ರಂಗವನ್ನು ಸ್ವಾಧೀ ಪಡಿಸುತ್ತಾರೆ. ದರ್ಪ- ದಬ್ಬಾಳಿಕೆ ಪ್ರಭುತ್ವ ಸಾಧಿಸುತ್ತದೆ. ತಾರಕಕ್ಕೇರಿದ ಅಸತ್ಯದ ಆರ್ಭಟ ಬಹುಮಂದಿಯನ್ನು ದಿಗ್ಭ್ರಾಂತಗೊಳಿಸುತ್ತದೆ. ಅದರ ಮೆರುಗು ಅವರನ್ನು ಕುರುಡಾಗಿಸುತ್ತ ಪರಹಿಂಸೆಯಿಂದ ನೆಮ್ಮದಿ ಪಡೆಯುವ ಪಿಶಾಚಿಗಳು ತಾಂಡವವಾಡುತ್ತವೆ. ಅವರು ಬೆಳಕಿ ವಾಹಕರ ವಿರುದ್ಧ ಹಿಂಸೆಯ ಹೊಳೆ ಹರಿಸುತ್ತಾರೆ. ತಪ್ಪುಗಳನ್ನು ಸೂಚಿಸುವ ಬೆರಳುಗಳನ ಕತ್ತರಿಸುತ್ತಾರೆ. ಹೀಗೆ ಮಾನವೇಚ್ಛೆಯು ಲೋಕವನ್ನು ಆಳುತ್ತದೆ. ದೇವಹಿತ ನಿರ್ಲಕ್ಷಿಸಲ್ಪಡುತ್ತ ಕೋಟ್ಯಾಂತರ ಜನರು ಮಾನವ ಗುಲಾಮಗಿರಿಯಲ್ಲಿ ಬಾಳ ಬೇಕಾಗುತ್ತದೆ. ಆದರೆ ಇದ ನಡುವೆಯೂ ತೌಹೀದನ್ನು ಸಮಗ್ರವಾಗಿ ಅಂಗೀಕರಿಸಿದ ಸತ್ಯ ವಿಶ್ವಾಸಿಯ ಲೋಕ ಬೇರೆಯೇ ಆಗಿರುತ್ತದೆ. ಇದು ಸ್ವಾತಂತ್ರ್ಯದ ನಿತ್ಯ ನೂತನ ಲೋಕವಾಗಿದೆ. ಕೋಟಿಗಟ್ಟ ಸೃಷ್ಟಿಗಳಲ್ಲೊಂದಾಗಿರುವ ಮಾನವನು ಪ್ರಪಂಚದೊಡೆಯನ ಸ್ಥಾನವನ್ನು ಕಸಿಯಲಿಕ್ಕಾ ಪೇಚಾಡುವುದನ್ನು ಆತ ಅನುಕಂಪದಿಂದ ನೋಡುತ್ತಾನೆ. ತನಗೆ ಸರ್ವಾಧಿಕಾರವಿದೆಯೆಂ ಭಾವಿಸಿ ಅಹಂಕಾರ ಪಡುವವನನ್ನು ತುಚ್ಛವಾಗಿ ನೋಡುತ್ತಾನೆ. ಪ್ರಬಲರೆಂದು ಭಾವಿಸು ಆಡಳಿತಗಾರರು ಮಹಾ ಸಾಧನೆ ಮಾಡುತ್ತಿರುವೆನೆಂಬ ಭಾವನೆಯಿಂದ ನಡೆಸುತ್ತಿರುವ ಕ ಚೇಷ್ಟೆಗಳಿಗೆ ಸತ್ಯವಿಶ್ವಾಸಿಯ ದೃಷ್ಟಿಯಲ್ಲಿ ಯಾವ ಬೆಲೆಯೂ ಇಲ್ಲ. ದೇವೇತರವಾದ ಆರಾ ವಸ್ತುಗಳು, ಸಾಮಾಜಿಕ ಆಚಾರಗಳು ಮತ್ತು ಆರ್ಥಿಕ ಪದ್ಧತಿಯೊಂದಿಗೆ ತಮ್ಮ ಮನಸ್ಸನ ಬೆಸೆಯದಂತಹ ವಿಶ್ವಾಸಿಗಳ ಔನ್ನತ್ಯ ಪ್ರಜ್ಞೆಯು ವರ್ಣಿಸಲಸಾಧ್ಯ. ಎಲ್ಲ ರೀತಿಯ ಕಪ ದೇವತೆಗಳನ್ನೂ ಪರಮಾಧಿಕಾರಿಗಳನ್ನೂ ನಿರಾಕರಿಸುವಂತಹ ಮಂದಿ ಪಾರತಂತ್ರ್ಯದ ಸಕ ಸಂಕೋಲೆಗಳನ್ನು ಕಡಿದು ಹಾಕಿ ಸ್ವಾತಂತ್ರ್ಯದ ಹೊಸ ಲೋಕದಲ್ಲಿ ವಿಹರಿಸುತ್ತಾರೆ. ಆದ್ದರಿಂ ವ್ಯಾವಹಾರಿಕ ಜಗತ್ತಿನಲ್ಲಿ ದೇವಧಿಕ್ಕಾರಿಗಳಿಗೆ ಆಧಿಪತ್ಯ ಮತ್ತು ಮಾನವ ನಿರ್ಮಿ ಪದ್ಧತಿಗಳಿಗೆ ಅಂಗೀಕಾರವಿದ್ದರೂ ಇಸ್ಲಾಮಿನ ಕ್ರಾಂತಿಕಾರೀ ಸಿದ್ಧಾಂತವನ್ನು ಅದರ ಪೂರ ಸ್ಫೂರ್ತಿಯೊಂದಿಗೆ ಮನದಲ್ಲಿ ಕಾಯ್ದುಕೊಂಡಿರುವವರ ಮಟ್ಟಿಗೆ ಅವರು ದೇವ ಹಿತದಿಂ ಕಟ್ಟಿ ಬೆಳೆಸಿದ ಹೊಸ ಜಗತ್ತಿನ ಪ್ರಾಯೋಜಕರಾಗಿರುತ್ತಾರೆ. ಅದರ ಕನಸು ಕಾಣುವವ ಮತ್ತು ಅದಕ್ಕಾಗಿ ಶ್ರಮಿಸುವವರಾಗಿರುತ್ತಾರೆ. ಜನರ ಗೌರವಾದರಗಳನ್ನು ಗಳಿಸಿದ ಪುರೋಹಿ

ಮತ್ತು ಆಡಳಿತಗಾರರ ಪ್ರತಾಪ, ಪ್ರೌಢಿಮೆ, ಡಂಭಾಚಾರಗಳು ಅವರ ಮೇಲೆ ಕಿಂಚಿತ್ತು ಪ್ರಭಾವ ಬೀರುವುದಿಲ್ಲ. ಎಲ್ಲವೂ ಸಣ್ಣ ಸಣ್ಣ ಮನುಷ್ಯರ ಚೇಷ್ಟೆಗಳೆಂದೇ ಭಾಸವಾಗುವುದು. ಅಲ್ಲಾಹೇತರರ ಪರಮಾಧಿಕಾರವನ್ನು ನಿರಾಕರಿಸುವ ಕ್ರಾಂತಿಕಾರಿಗಳಿಗೆ ಮಾತ್ರ ಇದು ಸಾಧ್ಯವಾದೀತು. ಅವರೇ ತೌಹೀದನ್ನು ಸಮಗ್ರವಾಗಿ ಮೈಗೂಡಿಸಿದ ಸೌಭಾಗ್ಯವಂತರು.

## ವೈರಿಗಳ ಮರು ಚಿಂತನೆ

ಜಗತ್ತಿನಲ್ಲಿ ನೂರಿಪ್ಪತ್ತು ಕೋಟಿ ಮುಸ್ಲಿಮರಿದ್ದಾರೆ. ಅವರೆಲ್ಲರ ವಿಶ್ವಾಸವೂ 'ಲಾ ಇಲಾಹ ಇಲ್ಲಲ್ಲಾಹ್' ಆಗಿದೆ. ಆದರೆ ಬಹುತೇಕ ಜನರಲ್ಲಿ ಅದು ಅರ್ಥ ಶೋಷಣೆಯಿಂದ ಸ್ಫೂರ್ತಿ ಹೀನವಾದ ಕೇವಲ ವಾಕ್ಯವಾಗಿದೆ. ಆದ್ದರಿಂದ ಅವರು ಆ ಪವಿತ್ರ ವಾಕ್ಯವನ್ನು ಉಚ್ಚರಿಸಿದಾಗ ಅದು ಅವರಲ್ಲಾಗಲೀ ಇತರರಲ್ಲಾಗಲೀ ವಿಶೇಷ ಪರಿಣಾಮ ಬೀರುವುದಿಲ್ಲ. ಆದರೆ ಆಧುನಿಕ ಇಸ್ಲಾಮಿ ಆಂದೋಲನಗಳೂ ಅದರ ಕಾರ್ಯಕರ್ತರೂ ಪ್ರಸ್ತುತ ವಿಶ್ವಾಸವನ್ನು ಘೋಷಿಸುವಾಗ ಉಂಟಾಗುವ ಪ್ರತಿಕ್ರಿಯೆಯು ಸಂಪೂರ್ಣ ಭಿನ್ನವಾಗಿರುವುದು.

"ಅಲ್ಫಾಝ್ ವ ಮಆನೀ ಮೆ ತಫಾವುತ್ ನಹೀಂ ಲೇಕಿನ್ ಮುಲ್ಲಾಕಾ ಅದಾನ್ ಔರ್ ಮುಜಾಹಿದ್ ಕಾ ಅದಾನ್ ಔರ್"

'ಶಬ್ದಗಳು ಮತ್ತು ಅರ್ಥಗಳಲ್ಲಿ ವ್ಯತ್ಯಾಸವಿಲ್ಲ. ಆದರೆ ಪುರೋಹಿತನ ಅದಾನ್ ಬೇರೆ ಮುಜಾಹಿದ್‌ನ ಅದಾನ್ ಬೇರೆ.'

ಪುರೋಹಿತರ ಭಾವ-ವಿಚಾರಗಳು ಕೇವಲ ಆರಾಧನೆಗೆ ಸಿಲುಕಿಕೊಂಡಿವೆ. ನಿರೀಕ್ಷೆ ಮತ್ತು ಸ್ವಪ್ನಗಳನ್ನು ಪೂಜಿಸುವ ಒಂದು ದೇವಾಲಯ ದೊರೆತ ಕೂಡಲೇ ಅವು ಸಂತೃಪ್ತವಾಗುತ್ತವೆ.

'ಮುಲ್ಲಾಕೋ ಜೋ ಮಸ್ಜಿದ್ ಮೆ ಹೈ, ಸಜ್‌ದೇ ಇಜಾಝತ್ ಕಿ ನಾದಾನ್ ಸಮಜ್ತಾ ಹೈ ಕೆ ಇಸ್ಲಾಮ್ ಹೈ ಆಝಾದ್'

'ಮಸೀದಿಯಲ್ಲಿ ಪುರೋಹಿತನಿಗೆ ಸಾಷ್ಟಾಂಗದ ಅನುಮತಿ ದೊರೆತಾಗ, ಆ ತಿಳಿಗೇಡಿ ಇಸ್ಲಾಮ್ ಸ್ವತಂತ್ರವಾಗಿದೆಯೆಂದು ಭಾವಿಸುತ್ತಾನೆ.'

ಆದರೆ ಕ್ರಾಂತಿಕಾರಿಯು ಒಂದು ಲೋಕದ ಕನಸು ಕಾಣುತ್ತಾನೆ. ನಿರೀಕ್ಷೆ ಮತ್ತು ಪ್ರಯತ್ನಗಳು ಅದರಲ್ಲಿ ಸೇರಿ ಕೊಂಡಿದೆ. ಪುರೋಹಿತನು ಅಲ್ಲಾಹನನ್ನು ಆರಾಧಿಸುವ ಮಸೀದಿಯಿಂದ ತೃಪ್ತನಾದರೆ ತೌಹೀದ್‌ನ ವಾಹಕನಾದ ಕ್ರಾಂತಿಕಾರಿಯು ದೇವ ಹಿತಾನುಸಾರವಿರುವ ಒಂದು ಹೊಸ ಲೋಕವನ್ನು ಗುರಿಯಾಗಿಟ್ಟು ಕೆಲಸ ಮಾಡುತ್ತಾನೆ.

ಈ ವ್ಯತ್ಯಾಸವನ್ನು ಆಧುನಿಕ ಜಗತ್ತಿನ ಮುಸ್ಲಿಮ್ ವೈರಿಗಳು ಚೆನ್ನಾಗಿ ಮನಗಂಡಿದ್ದಾರೆ.

ಇಂದು ಜಗತ್ತಿನಲ್ಲಿರುವ ಇಸ್ಲಾಮಿನ ಪ್ರಮುಖ ಮತ್ತು ಪ್ರಬಲ ವಿರೋಧಿಗಳು ಅಮೇರಿ ಮತ್ತು ಅದರ ಆಶ್ರಯದಲ್ಲಿರುವ ಬಂಡವಾಳ ಶಾಹೀ ಸಾಮ್ರಾಜ್ಯ ಶಕ್ತಿಗಳಾಗಿವೆಯಲ್ಲವೆ ಇಸ್ಲಾಮ್ ಮತ್ತು ಇಸ್ಲಾಮಿ ನವ ಜಾಗೃತಿಯು ತಮ್ಮ ಮುಂದಿರುವ ಮಹಾ ಸವಾಲೆಂ ಅಮೇರಿಕಾ ಮತ್ತು ನ್ಯಾಟೋ ಸ್ಪಷ್ಟವಾಗಿ ಹೇಳಿದೆ. ಅದೇ ವೇಳೆ ಪೋಲಿಸ್, ಸೇನೆ, ಆಯುಧ ಅಧಿಕಾರಗಳಿರುವ ಮುಸ್ಲಿಮರ ಆಡಳಿತಗಾರರು ಅಥವಾ ಅವರ ಜನರ ಬಗ್ಗೆ ಇಸ್ಲಾಮಿ ವೈರಿಗಳಿಗೆ ಯಾವ ಭಯವೂ ಇಲ್ಲ. ಅವರೊಡನೆ ದ್ವೇಷವಿಲ್ಲ. ಅವರೆಲ್ಲರೂ ನ್ಯೆ ಇಸ್ಲಾಮಿನ ವಿರುದ್ಧ ಪರಸ್ಪರ ಕೈ ಮಿಲಾಯಿಸಿದ್ದಾರೆ. ಮುಸ್ಲಿಮ್ ಚಕ್ರವರ್ತಿಗಳು, ರಾಜರು ಸುಲ್ತಾನರು ಸಹಸ್ರಾರು ಬಾರಿ 'ಲಾ ಇಲಾಹ ಇಲ್ಲಲ್ಲಾಹ್' ಹೇಳಿದರೂ ಸಾಮ್ರಾಜ್ಯ ಶಾಹಿ ಶಕ್ತಿಗಳ ಅರಮನೆಗಳಲ್ಲಿ ಯಾವುದೇ ಕಳವಳ ಅಥವಾ ದಿಗ್ಭ್ರಮೆ ಹುಟ್ಟಿಸುವುದಿಲ್ಲ. ಆದ ನಿರಾಯುಧರೂ ಲೌಕಿಕ ದೃಷ್ಟಿಯಿಂದ ಅಸಹಾಯಕರೂ ದುರ್ಬಲರೂ ಆಗಿರುವ ಇಸ್ಲಾಮಿ ಆಂದೋಲನದ ಕಾರ್ಯಕರ್ತರು ಅದೇ ಪವಿತ್ರ ಕುರ್‌ಆನ್ ವಾಕ್ಯವನ್ನು ಉಚ್ಛರಿಸಿದಾ ಸ್ವದೇಶದ ಶೋಷಕ ನಿರಂಕುಶಾಧಿಪತಿಗಳಂತೆಯೇ ಆಧುನಿಕ ಜಗತ್ತನ್ನು ನಿಯಂತ್ರಿಸುತ್ತಿರು ಬಂಡವಾಳಶಾಹೀ ರಾಷ್ಟ್ರಗಳ ನಾಯಕರೂ ಕಳವಳಗೊಳ್ಳುತ್ತಾರೆ. ಎಲ್ಲ ಶೋಷಕರಿಗು ಅಕ್ರಮಿಗಳಿಗೂ ಕಿರಿಕಿರಿಯಾಗುತ್ತದೆ. ಅವರ ಸುಖ ನಿದ್ರೆಗೆ ಅಡ್ಡಿಯಾಗುತ್ತದೆ. ಪ್ರವಾ ಇಬ್ರಾಹೀಮ್‌ರು(ಅ) ಏಕಾಂಗಿಯಾಗಿ 'ಲಾ ಇಲಾಹ ಇಲ್ಲಲ್ಲಾಹ್' ಎಂದು ಉಚ್ಛರಿಸಿದಾ ನಮ್ರೂದನಿಗೂ ಅದನ್ನು ಪ್ರವಾದಿ ಮೂಸಾರ(ಅ) ನಾಲಗೆಯಿಂದ ಕೇಳಿದಾಗ ಫರೋವನಿಗು ಆದ ಕಳವಳವು ಆಧುನಿಕ ನಮ್ರೂದ್ ಮತ್ತು ಫರೋವರನ್ನೂ ಕಾಡುತ್ತಿದೆ. ಹೀಗೆ ಅವರ ಒಗ್ಗಟ್ಟಾಗಿ ಇಸ್ಲಾಮಿ ಆಂದೋಲನದ ವಿರುದ್ಧ ಒಳ ಸಂಚುಗಳನ್ನು ನಡೆಸಿ ಅವುಗಳನ ನಾಶ ಪಡಿಸುವುದಕ್ಕಾಗಿ ಸರ್ವ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಪ್ರವಾದಿಗ ವಿರೋಧಿಗಳಂತೆಯೇ ಇಂದಿನ ಜಗತ್ತಿನ ಇಸ್ಲಾಮಿ ವೈರಿಗಳೂ ತೌಹೀದ್‌ನ ನೈಜ ಸ್ಥಾಯ ಮತ್ತು ಅದನ್ನು ಯಥಾವತ್ತಾಗಿ ಮೈಗೂಡಿಸಿದವರನ್ನು ಗುರುತಿಸಿದ್ದಾರೆಂದರ್ಥ. ಆಧುನಿ ಇಸ್ಲಾಮಿ ಆಂದೋಲನಗಳು ಅಷ್ಟಾದರೂ ವಿಜಯ ಸಾಧಿಸಿವೆಯೆಂದು ಇದರಿಂದ ವ್ಯಕ್ತವಾಗುತ್ತದೆ

## ಪ್ರವಾದಿಯವರ(ಸ) ಅನುಸರಣೆ

ಜಮಾಅತೆ ಇಸ್ಲಾಮಿಯ ಮೂಲ ವಿಶ್ವಾಸದ ದ್ವಿತೀಯ ಭಾಗವು ಮುಹಮ್ಮದ್(ಸ ಅಲ್ಲಾಹನ 'ರಸೂಲ್' ಎಂಬುದಾಗಿದೆ. ಪ್ರತಿಯೊಬ್ಬನೂ ಮುಸ್ಲಿಮನಾಗಬೇಕಾದರೆ ಅದನ್ನ ಅನಿವಾರ್ಯವಾಗಿ ಅಂಗೀಕರಿಸಬೇಕು.

ಮಾನವರಿಗಾಗಿ ಅಲ್ಲಾಹನು ನಿರ್ಣಯಿಸಿದ ಜೀವನ ವ್ಯವಸ್ಥೆಯನ್ನು ದೇವ ಪ್ರವಾದಿಗಳು ಅವರಿಗೆ ತಲುಪಿಸುತ್ತಿದ್ದರು. ಒಂದು ಲಕ್ಷಕ್ಕೂ ಮಿಕ್ಕಿ ಪ್ರವಾದಿಗಳನ್ನು ಈ ಕಾರ್ಯ ನಿರ್ವಹಣೆಗಾಗಿ ಭೂಮಿಯಲ್ಲಿ ನೇಮಿಸಲಾಗಿತ್ತು. ಪ್ರವಾದಿ ಮುಹಮ್ಮದ್‌ರು(ಸ) ಅ

ಣಿಯಲ್ಲಿ ಕೊನೆಯವರು. ಪೂರ್ವ ಪ್ರವಾದಿಗಳ ಮೂಲಕ ನೀಡಿದ ವಿಶ್ವಾಸ ಮತ್ತು ಯವನ್ನೇ ಅಂತ್ಯ ಪ್ರವಾದಿಯವರ ಮೂಲಕವೂ ನೀಡಲಾಗಿತ್ತು. ಆದರೆ ವಿವರಣೆ ಮತ್ತು ್ಯವಹಾರಿಕ ಜೀವನ ಕ್ರಮಗಳಲ್ಲಿ ಕಾಲ-ದೇಶಗಳಿಗನುಸಾರ ವ್ಯತ್ಯಾಸವಿತ್ತು. ಪ್ರವಾದಿ ುಹಮ್ಮದ್‌ರಿಗಿಂತ(ಸ) ಹಿಂದಿನ ದೇವ ಪ್ರವಾದಿಗಳ ಮೂಲಕ ಸಮರ್ಪಿಸಲಾದ ಕಾನೂನು ುಮಗಳು ಕೆಲವು ನಿರ್ದಿಷ್ಟ ಕಾಲದವರಿಗೂ ದೇಶದವರಿಗೂ ಸೀಮಿತವಾಗಿತ್ತು. ಆದರೆ ಂತ್ಯ ಪ್ರವಾದಿಯವರ(ಸ) ಮೂಲಕ ನೀಡಲಾದ ಜೀವನ ಪದ್ಧತಿಯು ಅಂತ್ಯ ದಿನದವರೆಗಿನ ಲ್ಲರಿಗೂ ಅನ್ವಯವಾಗುತ್ತದೆ. ಅದು ಕಾಲ-ದೇಶ-ಭೇದಗಳಿಗೆ ಅತೀತ, ಅನ್ನೂನ ಮತ್ತು ಕ್ಯ ನೂತನವಾಗಿದೆ.

ಪ್ರವಾದಿವರ್ಯರನ್ನು(ಸ) 'ರಸೂಲ್' ಆಗಿ ಅಂಗೀಕರಿಸುವುದರ ತಾತ್ಪರ್ಯವು ೀವನದ ಎಲ್ಲಾ ರಂಗಗಳಲ್ಲಿಯೂ ಅವರಿಂದ ಸಾಬೀತಾದ ಜೀವನ ಮಾದರಿಗಳನ್ನು ಥಾವತ್ತಾಗಿ ಅನುಗಮಿಸಬೇಕು. ಅದರಲ್ಲಿ ಹೆಚ್ಚು ಕಡಿಮೆ ಅಥವಾ ಬದಲಾವಣೆ ಾಡುವ ಹಕ್ಕು ಯಾರಿಗೂ ಇಲ್ಲ. ಪ್ರವಾದಿಗಳ ಮಾತು-ಕೃತಿಗಳೂ ಸಮ್ಮತಿಗಳೂ ನುಗಮಿಸಬೇಕಾದ ಚರ್ಯೆಯಲ್ಲಿ ಸೇರಿದೆ.

## ್ಯಾವಹಾರಿಕ ಮಾದರಿ

ಪ್ರವಾದಿಯವರು(ಸ) ಅಲ್ಲಾಹನ ಸಂದೇಶವನ್ನು ಜನರಿಗೆ ತಲುಪಿಸಿದ ಸಂದೇಶವಾಹಕರು ಾತ್ರವಲ್ಲ, ದೇವ ಸಂದೇಶಗಳನ್ನು ಅಧಿಕೃತವಾಗಿ ವಿವರಿಸಿ ಅವುಗಳ ವ್ಯಾವಹಾರಿಕ ೂಪವನ್ನು ತೋರಿಸಿಕೊಟ್ಟ ಮಾದರಿ ಪುರುಷರೂ ಆಗಿದ್ದಾರೆ. ಅಲ್ಲಾಹನು ಹೇಳಿದ್ದಾನೆ: ನೀವು ಅವರಿಗೆ ವಿವರಿಸಿ ಕೊಡಲಿಕ್ಕಾಗಿ ನಾವು ನಿಮಗೆ ಬೋಧನೆಗಳನ್ನು ವತೀರ್ಣಗೊಳಿಸಿದೆವು" (ಪವಿತ್ರ ಕುರ್‌ಆನ್,16: 44)

"ನೀವು ಅವರು ಇರಿಸಿಕೊಂಡಿರುವ ಆ ಭಿನ್ನಾಭಿಪ್ರಾಯಗಳ ವಸ್ತು ಸ್ಥಿತಿಯನ್ನು ವರಿಗೆ ವಿಶದೀಕರಿಸಲಿಕ್ಕಾಗಿ ನಾವು ಈ ಗ್ರಂಥವನ್ನು ನಿಮಗೆ ಅವತೀರ್ಣಗೊಳಿಸಿರುತ್ತೇವೆ."

(ಪವಿತ್ರ ಕುರ್‌ಆನ್,16: 64)

ಪವಿತ್ರ ಕುರ್‌ಆನ್ ಹೇಳಿರುವ ಅನೇಕ ವಿಷಯಗಳನ್ನು ಪ್ರವಾದಿ ಚರ್ಯೆಯ ೊರತು ಗ್ರಹಿಸಲು ಸಾಧ್ಯವಿಲ್ಲ. ಪವಿತ್ರ ಕುರ್‌ಆನ್ ನಮಾಝ್‌ನ ಆದೇಶ ನೀಡಿತು. ದರೆ ಅದನ್ನು ಹೇಗೆ ನಿರ್ವಹಿಸಬೇಕೆಂದು ವಿವರಿಸಲಿಲ್ಲ. ಫಜ್ರ್ ಎರಡು ರಕಅತ್, ಗ್ರಿಬ್ ಮೂರು ರಕಅತ್, ಉಳಿದವುಗಳು ನಾಲ್ಕು ರಕಅತ್ ಎಂದು ಪ್ರವಾದಿ(ಸ) ಲಿಸಿದರು ಮತ್ತು ಅವುಗಳ ಕ್ರಮವನ್ನೂ ತೋರಿಸಿ ಕೊಟ್ಟರು.

ಝಕಾತ್ ನೀಡಬೇಕೆಂದು ಅಲ್ಲಾಹ್ ಆಜ್ಞಾಪಿಸಿದನು. ಆದರೆ ಯಾವುದಕ್ಕೆಲ್ಲ

ನೀಡಬೇಕು, ಎಷ್ಟು ನೀಡಬೇಕೆಂದು ಪ್ರವಾದಿ ಚರ್ಯೆಯಿಂದ ತಿಳಿಯುತ್ತದೆ. ದೈನಂದಿ ಜೀವನ ಶಿಷ್ಟಾಚಾರಗಳು, ಚರ್ಯೆಗಳು, ವಿವಾಹ ಕ್ರಮ, ದಫನ ಕ್ರಮ, ಆರ್ಥಿ ವ್ಯವಸ್ಥೆಯ ವಿವರಣೆ, ಸಾಮೂಹಿಕ ಜೀವನದ ಕಾನೂನು ಕ್ರಮ, ಯುದ್ಧ ನೀತಿ, ಸಂಧಾ ಕ್ರಮ, ಆಡಳಿತ ವ್ಯವಸ್ಥೆ ಇತ್ಯಾದಿಗಳ ವ್ಯಾವಹಾರಿಕ ಮಾದರಿಗಾಗಿ ಪ್ರವಾದಿ ಚರ್ಯೆಯ ಅವಲಂಬಿಸದೆ ನಿರ್ವಾಹವಿಲ್ಲ.

ಹಾಗೆಯೇ ಕುರ್‌ಆನ್ ವಿವರಿಸದ ಸಮಸ್ಯೆಗಳ ಬಗ್ಗೆ ತೀರ್ಪು ನೀಡುವ ಹೊ ಮತ್ತು ಅಧಿಕಾರ ಪ್ರವಾದಿ(ಸ) ಅವರಿಗಿದೆ.

"ವಾಸ್ತವದಲ್ಲಿ ಅಲ್ಲಾಹ್ ಸತ್ಯವಿಶ್ವಾಸಿಗಳ ನಡುವೆ ಅವರೊಳಗಿಂದಲೇ-ಅವರಿ ಅವನ (ಅಲ್ಲಾಹನ) ಸೂಕ್ತಗಳನ್ನು ಓದಿ ಹೇಳುವ, ಅವರ ಜೀವನವನ್ನು ಸಂಸ್ಕರಿಸು ಮತ್ತು ಅವರಿಗೆ ಗ್ರಂಥ ಹಾಗೂ ವಿವೇಕದ ಶಿಕ್ಷಣ ನೀಡುವ ಓರ್ವ ಸಂದೇಶವಾಹಕನನ ನಿಯೋಜಿಸಿ, ಅವರ ಮೇಲೆ ಬಹುದೊಡ್ಡ ಉಪಕಾರ ಮಾಡಿದ್ದಾನೆ. ವಸ್ತುಶಃ ಅವರು ಮುಂಚೆ ವ್ಯಕ್ತವಾದ ಪಥ ಭ್ರಷ್ಟತೆಯಲ್ಲಿ ಬಿದ್ದಿದ್ದರು." (ಪವಿತ್ರ ಕುರ್‌ಆನ್,3: 16

ತಮಗೆ ದೊರೆತ ದಿವ್ಯ ಸಂದೇಶಗಳ ಹಿನ್ನೆಲೆಯಲ್ಲಿ ಒಳಿತು ಕೆಡುಕುಗಳನ್ನು ಗುರುತಿ ತದನುಸಾರ ಹಲಾಲ್ ಹರಾಮ್‌ಗಳನ್ನು ನಿರ್ಧರಿಸುವ ಹೊಣೆಯನ್ನು ಅಲ್ಲಾಹ ಪ್ರವಾದಿಯವರಿಗೆ(ಸ) ವಹಿಸಿ ಕೊಟ್ಟಿದ್ದಾನೆ. ಕುರ್‌ಆನ್ ಹೀಗೆಂದಿದೆ: "ಇವರು (ಪ್ರವಾದಿ ಅವರಿಗೆ (ಜನರಿಗೆ) ಸತ್ಕರ್ಮದ ಆದೇಶ ನೀಡುತ್ತಾರೆ ಮತ್ತು ದುಷ್ಕೃತ್ಯದಿಂದ ತಡೆಯುತ್ತಾ ಅವರಿಗೆ ಶುದ್ಧ ವಸ್ತುಗಳನ್ನು ಹಲಾಲ್(ಧರ್ಮ ಸಮ್ಮತ) ಮತ್ತು ಅಶುದ್ಧ ವಸ್ತುಗಳನ ಹರಾಮ್(ನಿಷಿದ್ಧ) ಗೊಳಿಸುತ್ತಾರೆ. ಅವರ ಮೇಲೆ ಹೇರಲ್ಪಟ್ಟಿರುವ ಹೊರೆಗಳನ ಇಳಿಸುತ್ತಾರೆ. ಅವರು ಬಿಗಿಯಲ್ಪಟ್ಟಿದ್ದ ಬಂಧನಗಳನ್ನು ಬಿಡಿಸುತ್ತಾರೆ."

(ಪವಿತ್ರ ಕುರ್‌ಆನ್,7: 15

ಹೀಗೆಯೇ ಸಮಾಜದಲ್ಲಿ ಉದ್ಭವಿಸುವ ಸಮಸ್ಯೆಗಳಿಗೆ ಅಂತಿಮ ತೀರ್ಪು ನೀಡು ಅಧಿಕಾರವನ್ನು ಅಲ್ಲಾಹನು ಪ್ರವಾದಿಯವರಿಗೆ(ಸ) ಕೊಟ್ಟಿದ್ದಾನೆ. ಪ್ರವಾದಿಗಳ ತೀರ್ಪನ ಸಂಪೂರ್ಣವಾಗಿ ಪಾಲಿಸಬೇಕಾದುದು ಸತ್ಯ ವಿಶ್ವಾಸಿಗಳ ಹೊಣೆಯಾಗಿದೆ.

ಅಲ್ಲಾಹನು ತಿಳಿಸಿದ್ದಾನೆ: "ಓ ಮುಹಮ್ಮದರೇ, ನಿಮ್ಮ ಪ್ರಭುವಿನಾಣೆ, ಇವರ ತಮ್ಮೊಳಗಿನ ಭಿನ್ನಾಭಿಪ್ರಾಯಗಳಲ್ಲಿ ನಿಮ್ಮನ್ನು ತೀರ್ಪು ನೀಡುವವರೆಂದು ಒಪ್ಪಿಕೊಂಡ ಆ ಬಳಿಕ ನೀವು ಕೊಟ್ಟ ತೀರ್ಪಿನ ಬಗ್ಗೆ ತಮ್ಮ ಮನಸ್ಸಿನಲ್ಲೂ ಯಾವುದೇ ಸಂಕೋ ಪಡದೆ ಅದನ್ನು ಸರ್ವ ಸಂಪೂರ್ಣವಾಗಿ ಒಪ್ಪಿಕೊಳ್ಳುವವರೆಗೂ ಅವರು ಖಂಡಿತ ಸ ವಿಶ್ವಾಸಿಗಳಾಗಲಾರರು." (ಪವಿತ್ರ ಕುರ್‌ಆನ್,4: 65

ಆದ್ದರಿಂದಲೇ ಪ್ರವಾದಿಯವರನ್ನು(ಸ) ಅನುಸರಿಸುವುದು ಅವರ ಚರ್ಯೆಯನ್ನು ಪೂರ್ಣವಾಗಿ ಅನುಗಮಿಸುವುದು ಸತ್ಯ ವಿಶ್ವಾಸಿಗಳ ಮೇಲೆ ಕಡ್ಡಾಯವಾಗಿದೆ. ಅಲ್ಲಾಹನು ಳುತ್ತಾನೆ: "ಓ ಸತ್ಯ ವಿಶ್ವಾಸಿಗಳೇ, ಅಲ್ಲಾಹನ ಆಜ್ಞಾಪಾಲನೆ ಮಾಡಿರಿ. ಸಂದೇಶವಾಹಕರ ತ್ತು ನಿಮ್ಮೊಳಗಿನ 'ಉಲುಲ್ ಅಮ್ರ್'ರ (ಆಜ್ಞಾಧಿಕಾರ ಹೊಂದಿದವರ) ಆಜ್ಞಾಪಾಲನೆ ಾಡಿರಿ. ಅನಂತರ ನಿಮ್ಮೊಳಗೆ ಯಾವುದಾದರೊಂದು ವಿಷಯದಲ್ಲಿ ವಿವಾದವುಂಟಾದರೆ ವು ನಿಜಕ್ಕೂ ಅಲ್ಲಾಹನ ಮತ್ತು ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸುತ್ತೀರಾದರೆ ವಿವಾದವನ್ನು ಅಲ್ಲಾಹ್ ಮತ್ತು ಸಂದೇಶವಾಹಕರ ಕಡೆಗೆ ತಿರುಗಿಸಿರಿ. ಇದುವೇ ಅತ್ಯಂತ ುಯಾದ ಕ್ರಮ. ಇದು ಪರಿಣಾಮದ ದೃಷ್ಟಿಯಿಂದಲೂ ಉತ್ತಮವಾಗಿದೆ."

(ಪವಿತ್ರ ಕುರ್‌ಆನ್,4: 59)

"ರಸೂಲರು ನಿಮಗೆ ಏನು ಕೊಡುವರೋ ಅದನ್ನು ಸ್ವೀಕರಿಸಿರಿ ಮತ್ತು ಯಾವುದರಿಂದ ವರು ನಿಮ್ಮನ್ನು ತಡೆಯುವರೋ ಅದರಿಂದ ದೂರವಿರಿ. ಅಲ್ಲಾಹನನ್ನು ಭಯ ಪಡಿರಿ. ಲ್ಲಾಹನು ಕಠಿಣವಾಗಿ ಶಿಕ್ಷಿಸುವವನಾಗಿರುತ್ತಾನೆ." (ಪವಿತ್ರ ಕುರ್‌ಆನ್,58: 7)

"ಓ ಪೈಗಂಬರರೇ, ನೀವು ಜನರೊಡನೆ ಹೀಗೆ ಹೇಳಿ ಬಿಡಿರಿ, ನೀವು ನಿಜವಾಗಿಯೂ ಲ್ಲಾಹನನ್ನು ಪ್ರೀತಿಸುತ್ತೀರೆಂದಾದರೆ ನನ್ನನ್ನು ಅನುಕರಿಸಿರಿ. ಅಲ್ಲಾಹ್ ನಿಮ್ಮನ್ನು ್ರೀತಿಸುವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವನು. ಅವನು ಮಹಾ ಕ್ಷಮಾಶೀಲನೂ ಕರುಣಾಮಯಿಯೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್,3: 31)

"ಓ ಮುಹಮ್ಮದರೇ(ಸ), ನಾವು ನಿಮ್ಮನ್ನು ಮಾನವರಿಗಾಗಿ ಸಂದೇಶವಾಹಕರಾಗಿ ವಾನಿಸಿರುತ್ತೇವೆ. ಇದರ ಬಗ್ಗೆ ಅಲ್ಲಾಹನ ಸಾಕ್ಷ್ಯವೇ ಸಾಕು. ಸಂದೇಶವಾಹಕನನ್ನು ನುಸರಿಸಿದವನು ವಾಸ್ತವದಲ್ಲಿ ಅಲ್ಲಾಹನನ್ನು ಅನುಸರಿಸಿದನು. ಯಾವನಾದರೂ ಮುಖನಾಗಿ ಬಿಟ್ಟರೆ, ನಾವು ನಿಮ್ಮನ್ನು ಅವರ ಮೇಲೆ ರಕ್ಷಕರನ್ನಾಗಿ ಮಾಡಿಯಂತು ಕಳುಹಿಸಿರುವುದಿಲ್ಲ." (ಪವಿತ್ರ ಕುರ್‌ಆನ್,4: 80)

"ರಸೂಲರ ಆಜ್ಞೆಗೆ ವಿರುದ್ಧವಾಗಿ ವರ್ತಿಸುವವರು ತಾವು ಯಾವುದಾದರೂ ಆಪತ್ತಿನಲ್ಲಿ ಲುಕಿ ಬಿಡಬಹುದು ಅಥವಾ ತಮ್ಮ ಮೇಲೆ ವೇದನಾಯುಕ್ತ ಯಾತನೆ ಎರಗಬಹುದೆಂದು ಯ ಪಡಬೇಕು." (ಪವಿತ್ರ ಕುರ್‌ಆನ್,24: 63)

"ಅವರ ಮೊಕದ್ದಮೆಯ ಬಗ್ಗೆ ತೀರ್ಪು ನೀಡುವಂತಾಗಲು ಅವರನ್ನು ಅಲ್ಲಾಹ್ ಮತ್ತು ರಸೂಲರ ಕಡೆಗೆ ಕರೆಯಲಾದಾಗ, ನಾವು ಆಲಿಸಿದೆವು ಮತ್ತು ಅನುಸರಿಸಿದೆವು ಎಂದು ಹೇಳುವುದೇ ಸತ್ಯವಿಶ್ವಾಸಿಗಳ ಕರ್ತವ್ಯವಾಗಿರುತ್ತದೆ. ಇಂತಹವರೇ ಯಶಸ್ವಿಗಳಾಗುವರು."

(ಪವಿತ್ರ ಕುರ್‌ಆನ್,24: 51)

"ಅವರೊಡನೆ 'ಅಲ್ಲಾಹ್' ಮತ್ತು ರಸೂಲರ ಅನುಸರಣೆ ಮಾಡಿರಿ ಎಂ ಹೇಳಿರಿ. ಅವರು ನಿಮ್ಮ ಆಹ್ವಾನವನ್ನು ಸ್ವೀಕರಿಸದಿದ್ದರೆ ಅಲ್ಲಾಹ್ ತನ್ನ ಮತ್ತು ತ ರಸೂಲರ ಅನುಸರಣೆಯನ್ನು ನಿರಾಕರಿಸುವವರನ್ನು ಪ್ರೀತಿಸುವುದು ಖಂಡಿತವಾಗಿಯ ಅಸಂಭವ." (ಪವಿತ್ರ ಕುರ್‌ಆನ್,3: 3

"ಅಲ್ಲಾಹನ ಹಾಗೂ ಸಂದೇಶವಾಹಕರ ಆಜ್ಞೆಯನ್ನು ಪಾಲಿಸಿರಿ. ನೀ ಕೃಪಾರ್ಹರಾಗುವಿರೆಂದು ನಿರೀಕ್ಷಿಸಬಹುದು." (ಪವಿತ್ರ ಕುರ್‌ಆನ್,24: 5

"ಅಲ್ಲಾಹ್ ಮತ್ತು ಅವನ ಸಂದೇಶವಾಹಕರು ಯಾವುದಾದರೊಂದು ವಿಷಯ ತೀರ್ಮಾನ ಮಾಡಿಬಿಟ್ಟರೆ ಆ ವಿಷಯದಲ್ಲಿ ಸ್ವತಃ ತೀರ್ಮಾನ ಕೈಗೊಳ್ಳುವ ಹಕ್ಕು (ಸ ವಿಶ್ವಾಸಿಗಳಾದ) ಯಾವ ಸ್ತ್ರೀ ಪುರುಷರಿಗೂ ಇಲ್ಲ. ಯಾರಾದರೂ ಅಲ್ಲಾಹ್ ಮತ ಅವನ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದರೆ, ಅವನು ಸುವ್ಯಕ್ತ ಪಥ ಭ್ರಷ್ಟತೆಯ ಬಿದ್ದು ಬಿಟ್ಟನು." (ಪವಿತ್ರ ಕುರ್‌ಆನ್,33: 3

ಜೀವನದ ಎಲ್ಲ ರಂಗಗಳಲ್ಲಿ ಪ್ರವಾದಿಯವರ(ಸ) ಆಜ್ಞೆಗಳನ್ನು ಪಾಲಿಸುವುದು ಸ ವಿಶ್ವಾಸಿಗಳ ಕರ್ತವ್ಯವೆಂದು ಮೇಲಿನ ಕುರ್‌ಆನ್ ವಾಕ್ಯಗಳಿಂದ ವ್ಯಕ್ತವಾಗುತ್ತವೆ. "ಪ್ರವಾದಿ ಆಜ್ಞೆಗಳೆಲ್ಲವೂ ದೇವದತ್ತವಾಗಿವೆ; ಅವರು ತಮ್ಮಿಚ್ಛೆಯಂತೆ ಮಾತಾಡುವುದಿಲ್ಲ. ಅ ಅವರಿಗೆ ದೊರೆತ ದಿವ್ಯವಾಣಿ ಮಾತ್ರವಾಗಿದೆ." (ಪವಿತ್ರ ಕುರ್‌ಆನ್,53: 3-

ಹಾಗೆಯೇ ಪ್ರವಾದಿಯವರ ಅನುಸರಣೆಯು ಅಲ್ಲಾಹನ ಅನುಮತಿಗೆ ಬದ್ಧವಾಗಿ "ನಾವು ಪ್ರತಿಯೊಬ್ಬ ಸಂದೇಶವಾಹಕನನ್ನೂ ಅಲ್ಲಾಹನ ಆಜ್ಞೆ ಪ್ರಕಾ ಅನುಸರಿಸಲ್ಪಡಲಿಕ್ಕಾಗಿಯೇ ಕಳುಹಿಸಿರುತ್ತೇವೆ." (ಪವಿತ್ರ ಕುರ್‌ಆನ್,4: 3-

ಇನ್ನೊಂದರ್ಥದಲ್ಲಿ ಪ್ರವಾದಿಯವರ(ಸ) ಅನುಸರಣೆಯು ಶರ್ತಬದ್ಧವಾಗಿದೆ. ಏಕೆಂದ ಅವರು ಅಲ್ಲಾಹನ ಪ್ರವಾದಿಯಾಗಿದ್ದಾರೆ. ಅವರು ನೀಡುವ ವಿಧಿ-ನಿಷೇಧಗಳು ಅಲ್ಲಾಹ ನೀಡಿದ ವಿಧಿ ನಿಷೇಧಗಳಾಗಿವೆ ಮತ್ತು ಅವರನ್ನು ಅನುಸರಿಸಬೇಕೆಂದು ಅಲ್ಲಾಹ ಆಜ್ಞಾಪಿಸಿರುವನೆಂಬ ನೆಲೆಯಲ್ಲಿ ಅವರನ್ನುಅನುಸರಿಸಲಾಗುತ್ತದೆ. ಆದರೆ ಅಲ್ಲಾಹನ ಹೆಸರ ಪ್ರವಾದಿಯ ಆದೇಶಗಳನ್ನು ದೇವನ ದಾಸರು ಪ್ರಶ್ನಿಸದೆ ಮನಃಪೂರ್ವಕವಾಗಿ ಅನುಸರಿಸಬೇಕೆಂ ಅರ್ಥದಲ್ಲಿ ಅವರೊಂದಿಗಿನ ಅನುಸರಣೆಯು ಸಂಪೂರ್ಣ ನಿಶ್ಶರ್ತವಾಗಿದೆ.

ಈ ವಾಸ್ತವಿಕಾಂಶಗಳನ್ನು ತಿಳಿದು ಅಂಗೀಕರಿಸುವುದರಿಂದ ಮಾನವನಿಗೆ ಈ ಕೆಳಗಿ ವಿಷಯಗಳು ಅನಿವಾರ್ಯವಾಗುತ್ತದೆ:

1. ಮುಹಮ್ಮದ್‌ರಿಂದ(ಸ) ಎಂದು ಸಾಬೀತಾದ ಎಲ್ಲ ಶಿಕ್ಷಣ ಮತ ಮಾರ್ಗದರ್ಶನಗಳನ್ನು ಬೇಷರತ್ತಾಗಿ ಅಂಗೀಕರಿಸಬೇಕು.

2. ಒಂದು ವಿಷಯದ ಪ್ರೇರಣೆಗೆ ಅಥವಾ ಇನ್ನೊಂದರಿಂದ ತಡೆದು ನಿಲ್ಲುವುದಕ್ಕೆ ಿರ ಅಪ್ಪಣೆ ಅಥವಾ ನಿಷೇಧವು ಪ್ರವಾದಿ(ಸ) ಅವರಿಂದ ಸಾಬೀತಾಗಿದೆಯೆಂಬುದು ಮಾತ್ರ ಾಗಬೇಕು. ಅವನ ಅನುಸರಣೆಗೆ ಇನ್ನಾವ ಪುರಾವೆಯ ಅಗತ್ಯವೂ ಇರಬಾರದು.

3. ಪ್ರವಾದಿಯ(ಸ) ಹೊರತಾಗಿ ಇನ್ನಾರದೇ ನಿಶ್ಶರ್ತ ನಾಯಕತ್ವ ಮತ್ತು ರ್ಗದರ್ಶನವನ್ನು ಅಂಗೀಕರಿಸಬಾರದು. ಇತರ ಮನುಷ್ಯರ ಅನುಸರಣೆಯು ಅಲ್ಲಾಹನ ಥ ಮತ್ತು ಪ್ರವಾದಿಯ ಚರ್ಯೆಗೆ ಬದ್ಧವಾಗಿರಬೇಕು. ಅವರಿಂದ ಮುಕ್ತವಾಗಿರಬಾರದು.

4. ತನ್ನ ಜೀವನದ ಎಲ್ಲ ವ್ಯವಹಾರಗಳಲ್ಲಿಯೂ ಅಲ್ಲಾಹನ ಗ್ರಂಥ ಮತ್ತು ಾದಿಯ ಚರ್ಯೆಯನ್ನೇ ನೈಜ ಪ್ರಮಾಣ, ಮೂಲಾಧಾರ ಮತ್ತು ಅವಲಂಬವಾಗಿ ಗೀಕರಿಸಬೇಕು. ಕುರ್‌ಆನ್ ಮತ್ತು ಸುನ್ನತ್‌ಗೆ ಹೊಂದುವ ವಿಚಾರ, ವಿಶ್ವಾಸ ಮತ್ತು ರ್ಗವನ್ನು ಅವಲಂಬಿಸಬೇಕು. ಅವುಗಳಿಗೆ ವಿರುದ್ಧವಾದವುಗಳನ್ನು ತಿರಸ್ಕರಿಸಬೇಕು.

5. ವೈಯಕ್ತಿಕ, ಕೌಟುಂಬಿಕ, ವಂಶೀಯ, ಜಾತೀಯ, ಸಾರ್ವಜನಿಕ, ರಾಷ್ಟ್ರೀಯ, ೀಯ ಮತ್ತು ಸಾಂಘಿಕವಾದ ಸಕಲ ಇಸ್ಲಾಮೇತರ ಪಕ್ಷಪಾತಗಳನ್ನು ಮನಸ್ಸಿನಿಂದ ಸೆಯಬೇಕು. ಪ್ರವಾದಿ(ಸ) ಅಭಿವ್ಯಕ್ತಗೊಳಿಸಿದ ಸತ್ಯದೊಂದಿಗಿನ ಪ್ರೀತ್ಯಾದರವನ್ನು ರುವಂತಹ ಅಥವಾ ಅದರೊಂದಿಗೆ ಪೈಪೋಟಿ ನಡೆಸುವಂತಹ ಪ್ರೀತ್ಯಾದರಗಳನ್ನು ಅನ್ಯರ ಗ್ಗೆ ಇರಿಸಬಾರದು.

6. ಪ್ರವಾದಿ(ಸ) ಅವರ ಹೊರತು ಯಾರನ್ನೂ ಸತ್ಯದ ಮಾನದಂಡವಾಗಿ ಿಡಬಾರದು. ಇನ್ನಾರನ್ನೂ ವಿಮರ್ಶೆಗೆ ಅತೀತವಾದವರೆಂದು ಪರಿಗಣಿಸಬಾರದು. ಾರದೇ ಬೌದ್ಧಿಕ ದಾಸ್ಯಕ್ಕೆ ಸಿಲುಕಬಾರದು. ಅಲ್ಲಾಹನು ನಿರ್ಣಯಿಸಿದ ಈ ಪರಿಪೂರ್ಣ ಾನದಂಡದ ಮೂಲಕ ಪ್ರತಿಯೊಬ್ಬರನ್ನೂ ಪರಿಶೀಲಿಸಿ ಅದರಂತೆ ಯಾರು ಯಾವ ್ನದಲ್ಲಿರುವರೋ ಅವರನ್ನು ಅದೇ ಸ್ಥಾನದಲ್ಲಿ ಇರಿಸಬೇಕು.

**(ಜಮಾಅತೆ ಇಸ್ಲಾಮಿ ಸಂವಿಧಾನ, ಪರಿಚ್ಛೇದ 3 ಪುಟ 5:6)**



# VIII

# ಇಕಾಮತುದ್ದೀನ್‌ನ ವಿವರಣೆ

ಇಕಾಮತುದ್ದೀನ್ ಅಥವಾ ಧರ್ಮದ ಸಂಪೂರ್ಣ ಸಂಸ್ಥಾಪನೆಯು ಜಮಾ ಇಸ್ಲಾಮಿಯ ಧ್ಯೇಯವಾಗಿದೆ. ಆ ಮೂಲಕ ದೇವ ಸಂಪ್ರೀತಿ ಮತ್ತು ಪರಲೋಕ ವಿಜಯವ ಗಳಿಸುವುದೇ ಅದರ ಉದ್ದೇಶ

ಇದು ಜಗತ್ತಿಗೆ ಬಂದ ಎಲ್ಲ ಪ್ರವಾದಿಗಳ ಧ್ಯೇಯವಾಗಿತ್ತು. ಪ್ರವಾದಿವರ್ಯರು(ಸ ಧ್ಯೇಯವನ್ನು ಅಂಗೀಕರಿಸಿ ಕಾರ್ಯ ನಿರ್ವಹಿಸುವಂತೆ ಆದೇಶಿಸಿದ್ದರು. ಎಲ್ಲ ವಿಶ್ವಾಸಿಗಳಿ ಅದನ್ನೇ ಆಜ್ಞಾಪಿಸಲಾಗಿದೆ.

ಅಲ್ಲಾಹನು ಹೀಗೆ ಹೇಳಿದ್ದಾನೆ: "ಅವನು ನೂಹರಿಗೆ ಆಜ್ಞಾಪಿಸಿದ್ದ ಧರ್ಮ ವಿಧಾನವ ನಿಮಗಾಗಿಯೂ ನಿಶ್ಚಯಿಸಿ ಕೊಟ್ಟಿದ್ದಾನೆ ಮತ್ತು (ಮುಹಮ್ಮದರೇ) ಈಗ ನಾವು ಅದ ದಿವ್ಯವಾಣಿಯ ಮೂಲಕ ನಿಮ್ಮ ಕಡೆಗೆ ಕಳುಹಿಸಿರುತ್ತೇವೆ. ಇದನ್ನೇ ನಾವು ಇಬ್ರಾಹೀವ ಮೂಸಾ ಮತ್ತು ಈಸಾರಿಗೂ ಬೋಧಿಸಿದ್ದೆವು. ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಇದ ಭಿನ್ನರಾಗದಿರಿ ಎಂಬ ಆದೇಶದೊಂದಿಗೆ" (ಪವಿತ್ರ ಕುರ್‌ಆನ್,42:

ಈ ಬಗ್ಗೆ ಪ್ರತಿಯೊಬ್ಬ ವಿಶ್ವಾಸಿಯೂ ಕೆಲವು ಮುಖ್ಯ ಅಂಶಗಳನ್ನು ತಿಳಿದಿರಬೇಕಾ

1. ಪ್ರವಾದಿ ಮುಹಮ್ಮದರು(ಸ) ಯಾವುದೇ ಹೊಸ ಧರ್ಮವನ್ನು ತಂದಿಲ್ಲ. ಪ್ರವ ಆದಮ್‌ರಿಂದ(ಅ) ಮೊದಲ್ಗೊಂಡು ಎಲ್ಲ ದೇವ ಪ್ರವಾದಿಗಳಿಗೆ ಅವತೀರ್ಣವಾದ ಧರ್ಮ ಒಂದೇ ಆಗಿತ್ತು. ಈ ವಾಸ್ತವಿಕತೆಯನ್ನು ಸ್ಪಷ್ಟಪಡಿಸಲಿಕ್ಕಾಗಿ ಕುರ್‌ಆನ್ ಇಲ್ಲಿ ಕೆಲವು ಪ್ರಮು ಪ್ರವಾದಿಗಳ ಹೆಸರನ್ನು ಪ್ರಸ್ತಾಪಿಸಿದೆ. ಮಾನವೇತಿಹಾಸದಲ್ಲಿ ಪ್ರಸಿದ್ಧವಾದ ಮೊದಲ ಜನಾಂ ನೇಮಿಸಲಾದ ಪ್ರವಾದಿ ನೂಹ್(ಅ) ಅರಬರು ತಮ್ಮ ಧರ್ಮಾಚಾರ್ಯರಾಗಿ ಅಂಗೀಕರಿ ಪ್ರವಾದಿ ಇಬ್ರಾಹೀಮ್(ಅ) ಯಹೂದಿ ಮತ್ತು ಕ್ರೈಸ್ತ ಜನಾಂಗಗಳಿಗೆ ನೇಮಿಸಲಾದ ಪ್ರವ ಮೂಸಾ(ಅ) ಮತ್ತು ಪ್ರವಾದಿ ಈಸಾ(ಅ) ಹಾಗೂ ಅಂತಿಮ ಪ್ರವಾದಿ ಮುಹಮ್ಮದ್‌ರ ವಿಷಯವನ್ನು ಕುರ್‌ಆನ್ ಎತ್ತಿ ಹೇಳಿದೆ. ಈ ಮೂಲಕ ಎಲ್ಲ ಪ್ರವಾದಿಗಳನ್ನೂ ಉದ್ದೇಶಿಸಲಾ ಎಲ್ಲರಿಗೂ ಅವತೀರ್ಣವಾದ ಧರ್ಮವು ಒಂದೇ ಆಗಿತ್ತು.

2. ಇಸ್ಲಾಮಿನ ಪಾರಿಭಾಷಿಕದಲ್ಲಿ ಧರ್ಮವೆಂದರೆ, ಅಲ್ಲಾಹನ ದಿವ್ಯತೆ ಮ ಸಾರ್ವಭೌಮತೆಯನ್ನು ಅಂಗೀಕರಿಸಿ ಕೇವಲ ಆತನಿಗೆ ಶರಣಾಗಿ, ವಿಧೇಯನಾಗಿ ಬಾಳುವುದಾ ಆರಾಧನೆ, ಆಚಾರ ಮತ್ತು ಅನುಷ್ಠಾನ. ಅದಕ್ಕಾಗಿ ವೈಯಕ್ತಿಕ ಸಮಸ್ಯೆಗಳು, ಆಥಿ

ವ್ಯವಹಾರಗಳು, ಸಾಮಾಜಿಕ ಸಂಬಂಧಗಳು, ನೈತಿಕ ಶಿಷ್ಟಾಚಾರಗಳು, ರಾಜಕೀಯ, ಆಡಳಿತ ರಂಗಗಳು ಹೀಗೆ ಜೀವನದ ಎಲ್ಲ ರಂಗಗಳಲ್ಲಿಯೂ ಕಾನೂನು ನಿರ್ಮಾಣದ ಪರಮಾಧಿಕಾರ ಕೇವಲ ಜಗದೊಡೆಯನಾದ ಅಲ್ಲಾಹನಿಗೆಂದು ಅಂಗೀಕರಿಸಬೇಕಾಗುತ್ತದೆ. ಇನ್ನೊಂದರ್ಥದಲ್ಲಿ, ಇಡೀ ಜಗತ್ತಿನ ಸೃಷ್ಟಿಕರ್ತ, ಸಂರಕ್ಷಕ, ಒಡೆಯನಾದ ಅಲ್ಲಾಹನನ್ನು ತನ್ನ ಏಕೈಕ ಆರಾಧ್ಯ, ಒಡೆಯ, ಕಾನೂನು ನಿರ್ಮಾತೃ ಎಂದು ಅಂಗೀಕರಿಸಿ ಆತನಿಂದ ಬಂದ ಮಾರ್ಗದರ್ಶನವನ್ನು ಅಂಗೀಕರಿಸುವುದೇ ಧರ್ಮ. ಅಲ್ಲಾಹನು ಹೀಗೆ ಹೇಳಿದ್ದಾನೆ: "ನಿಶ್ಚಯವಾಗಿಯೂ ಅಲ್ಲಾಹನ ಬಳಿ ಧರ್ಮವು ಇಸ್ಲಾಮ್ ಮಾತ್ರವಾಗಿದೆ." (ಪವಿತ್ರ ಕುರ್‌ಆನ್,3: 19)

ಇಲ್ಲಿ ಇಸ್ಲಾಮ್ ಎಂಬುದರ ತಾತ್ಪರ್ಯವು ಅನುಸರಣೆ, ವಿಧೇಯತೆ, ದಾಸ್ಯ ಎಂದಾಗಿದೆ. ಕೇವಲ ಅಲ್ಲಾಹನನ್ನು ನೈಜ ಒಡೆಯನಾಗಿ ಅಂಗೀಕರಿಸಿ ಜೀವನವನ್ನು ಆತನಿಗೆ ಸಂಪೂರ್ಣವಾಗಿ ಸಮರ್ಪಿಸುವುದೇ ಧರ್ಮ. ಅದುವೇ ಆತನ ಆರಾಧನೆಯೂ ಆಗಿದೆ. ಕೃತಕ ಸಾರ್ವಭೌಮತೆಯನ್ನು ಮೆರೆದು ದಿವ್ಯತೆಯ ಸೋಗು ಹಾಕುವವರನ್ನು ನಿರಾಕರಿಸಬೇಕಾದುದು ಅದರ ಅನಿವಾರ್ಯ ಬೇಡಿಕೆಯಾಗಿದೆ. ಎಲ್ಲ ಪ್ರವಾದಿಗಳೂ ಇದೇ ವಿಷಯವನ್ನು ಕಲಿಸಿದ್ದರು. ಕುರ್‌ಆನ್ ಹೇಳುತ್ತದೆ: "ಎಲ್ಲ ಸಮುದಾಯಗಳಿಗೂ ನಾವು ಪ್ರವಾದಿಗಳನ್ನು ನೇಮಿಸಿದ್ದೇವೆ. ನೀವು ಕೇವಲ ಅಲ್ಲಾಹನ ಆಜ್ಞಾನುವರ್ತಿಗಳಾಗಿ ಬಾಳಿರಿ. ಪೈಶಾಚಿಕ ಶಕ್ತಿಗಳನ್ನು ತಿರಸ್ಕರಿಸಿರಿ ಎಂಬ ಬೋಧನೆಯೊಂದಿಗೆ." (ಪವಿತ್ರ ಕುರ್‌ಆನ್,16: 36)

3. ಜೀವನದ ಎಲ್ಲ ರಂಗಗಳಿಗೂ ಅಲ್ಲಾಹನ ನಿಯಮ ನಿರ್ದೇಶನ ದೊರೆಯ ಬೇಕಾದುದು ಆ ಎಲ್ಲ ರಂಗಗಳಲ್ಲಿ ಕೇವಲ ಅಲ್ಲಾಹನ ಸಾರ್ವಭೌಮತೆಯನ್ನು ಅಂಗೀಕರಿಸುವುದರ ಅನಿವಾರ್ಯ ಬೇಡಿಕೆಯಾಗಿದೆ. ಎಲ್ಲಾ ಕಾಲಗಳಲ್ಲಿಯೂ ಜನರಿಗೆ ದೇವ ಮಾರ್ಗದರ್ಶನ ದೊರೆಯುವುದೆಂದು ಅಲ್ಲಾಹನು ಮೊದಲೇ ತಿಳಿಸಿದ್ದಾನೆ. ಮಾನವ ಜೀವನದ ಜಯಾಪಜಯಗಳ ನೈಜ ಮಾನದಂಡವು ಅದರೊಂದಿಗಿನ ಧೋರಣೆಯನ್ನು ಅವಲಂಬಿಸಿದೆಯೆಂದೂ ಸ್ಪಷ್ಟಪಡಿಸಲಾಗಿದೆ. ಪ್ರವಾದಿ ಆದಮ್‌ರನ್ನು(ಅ) ಭೂಮಿಗೆ ಕಳುಹಿಸುವಾಗ ಅಲ್ಲಾಹನು ಹೀಗೆ ತಿಳಿಸಿದ್ದಾನೆ:

"ನನ್ನ ಕಡೆಯಿಂದ ಮಾರ್ಗದರ್ಶನವು ನಿಮ್ಮ ಬಳಿ ಬಂದಾಗ, ಯಾರು ಆ ಮಾರ್ಗದರ್ಶನದಂತೆ ನಡೆಯುವರೋ ಅವರಿಗೆ ಯಾವುದೇ ಭಯ ಮತ್ತು ಚಿಂತೆ ಇರಲಾರದು. ಆ ಮಾರ್ಗದರ್ಶನವನ್ನು ಮಾನ್ಯ ಮಾಡಲು ನಿರಾಕರಿಸುವವರೋ ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವವರೂ ನರಕಾಗ್ನಿಯಲ್ಲಿ ಬೀಳುವವರಾಗಿದ್ದು ಅಲ್ಲಿ ಅವರು ಸದಾಕಾಲ ಇರುವವರು." (ಪವಿತ್ರ ಕುರ್‌ಆನ್,2: 39)

4. ಯಾವುದಾದರೊಂದು ಜೀವನ ಪದ್ಧತಿಯನ್ನು ವಿಧೇಯತೆಯಿಂದ ಬೇಷರತ್ತಾಗಿ

ಅಂಗೀಕರಿಸುವುದನ್ನು 'ಧರ್ಮ'ವೆಂದು ಕರೆಯಲಾಗುತ್ತಿದೆ. ಅದು ಅಲ್ಲಾಹನದ್ದಾಗಿದ್ದರೆ ದೇ ಧರ್ಮ. ಅವರ ಧರ್ಮವು ಇತರರಿಂದ ಅಂಗೀಕರಿಸಿದ್ದಾಗಿದ್ದರೆ ಕುರ್‌ಆನ್ ಹೀಗೆ ಹೇಳುತ್ತ

"ಇಸ್ಲಾಮಿನ ಹೊರತು ಯಾರಾದರೂ ಇತರ ಪದ್ಧತಿಯನ್ನು ಸ್ವೀಕರಿಸಲಿಚ್ಛಿಸಿದರೆ ಅವ ಆ ಪದ್ಧತಿಯನ್ನು ಎಷ್ಟು ಮಾತ್ರಕ್ಕೂ ಮಾನ್ಯ ಮಾಡಲಾಗದು" (ಪವಿತ್ರ ಕುರ್‌ಆನ್,3: 8

ಕುರ್‌ಆನ್ ಹೇಳುತ್ತದೆ: "ಇವರೇನು ಅಲ್ಲಾಹನ ಅನುಸರಣಾ ರೀತಿ(ಧರ್ಮ)ಯನ ಬಿಟ್ಟು ಬೇರೆ ಯಾವುದಾದರೂ ರೀತಿಯನ್ನು ಅನುಸರಿಸಲು ಇಷ್ಟ ಪಡುತ್ತಾರೆಯೇ ವಸ್ತು ಆಕಾಶಗಳ ಮತ್ತು ಭೂಮಿಯ ಸಕಲ ವಸ್ತುಗಳೂ ಬಯಸಿಯೋ ಬಯಸದೆಯೋ ಅಲ್ಲಾಹ ಆಜ್ಞಾಪಾಲಕಗಳಾಗಿಯೇ(ಮುಸ್ಲಿಮ್‌ಗಳಾಗಿ) ಇವೆ ಮತ್ತು ಸರ್ವರಿಗೂ ಅವನ ಕಡೆಗ ಮರಳಲಿಕ್ಕಿದೆ."

(ಪವಿತ್ರ ಕುರ್‌ಆನ್,2: 8

"ಅಲ್ಲಾಹನಿಗೆ ಶರಣು ಹೋಗಿ ಸುನೀತನಾಗಿ ಏಕ ನಿಷ್ಠೆಯಿಂದ ಇಬ್‌ರಾಹೀಮರ ಅಲ್ಲಾಹನು ತನ್ನ ಮಿತ್ರನಾಗಿಸಿಕೊಂಡ ಆ ಇಬ್ರಾಹೀಮರ- ಸಂಪ್ರದಾಯವನ ನುಸರಿಸುವವನಿಗಿಂತ ಉತ್ತಮವಾದ ಜೀವನ ಪದ್ಧತಿ ಇನ್ನಾರದ್ದಾಗಿರಲು ಸಾಧ್ಯ?"

(ಪವಿತ್ರ ಕುರ್‌ಆನ್,4: 125

5. ಎಲ್ಲ ಪ್ರವಾದಿಗಳೂ ಅಲ್ಲಾಹನ ಜೀವನ ಪದ್ಧತಿಯನ್ನು ಅಂಗೀಕರಿಸಿ ಆತನಿ ವಿಧೇಯವಾಗಿ ಬಾಳಬೇಕೆಂದು ಬೋಧಿಸಿದ್ದರು. ಪವಿತ್ರ ಕುರ್‌ಆನ್, ಹೇಳುತ್ತದೆ: "ತಮ್ಮ ಸಂತತಿಗಳಿಗೂ ಅವರು ಅದೇ ಸಂಪ್ರದಾಯದಂತೆ ನಡೆಯುವ ಉಪದೇಶ ಮಾಡಿದ್ದರು. ಅವ ಉಪದೇಶವನ್ನೇ ಯಾಕೂಬರು ತನ್ನ ಸಂತತಿಗೂ ಮಾಡಿದರು. ಅವರು ನನ್ನ ಮಕ್ಕಳೇ, ನಿಶ್ಚಯವಾಗಿಯೂ ಅಲ್ಲಾಹನು ನಿಮಗಾಗಿ ಆ ದೀನನ್ನೇ (ಧರ್ಮವನ್ನೇ) ಆಯ್ದಿರುವನು. ಆದುದರಿಂದ ಕೊನೆಯುಸಿರಿನ ತನಕವೂ ಮುಸ್ಲಿಮರಾಗಿಯೇ ಜೀವಿಸಿರಿ"

(ಪವಿತ್ರ ಕುರ್‌ಆನ್,2: 132

ಹಾಗೆಯೇ ದೇವ ವ್ಯವಸ್ಥೆಯು ಇತರೆಲ್ಲ ವ್ಯವಸ್ಥೆಗಳನ್ನು ಮೀರಿಸುವುದೇ ಪ್ರವಾದಿತ್ವ ರಾಯಭಾರದ ಉದ್ದೇಶವಾಗಿದೆ. ಅಲ್ಲಾಹನು ಹೇಳಿದ್ದಾನೆ: "ಆತನೇ ಸನ್ಮಾರ್ಗ ಮತ್ತು ಸತ್ಯ ಧರ್ಮದೊಂದಿಗೆ ಪ್ರವಾದಿಯನ್ನು ನೇಮಿಸಿರುತ್ತಾನೆ. ಆ ವ್ಯವಸ್ಥೆಯು ಇತರೆಲ್ಲ ವ್ಯವಸ್ಥೆಗಳನ್ನು ಜಯಿಸಲಿಕ್ಕಾಗಿ" (ಪವಿತ್ರ ಕುರ್‌ಆನ್,9: 33, 48: 28, 61: 9)

6. ಅಲ್ಲಾಹನ ಜೀವನ ವ್ಯವಸ್ಥೆಯನ್ನು ವಿಧೇಯತೆಯಿಂದ ಅಂಗೀಕರಿಸಿ ಬಾಳುವುದೇ ಧರ್ಮಾನುಸರಣೆಯಾಗಿದೆ. ಶರೀಅತ್, ಆ ಜೀವನಾದರ್ಶದ ವ್ಯಾವಹಾರಿಕ ರೂಪವಾಗಿದೆ. ಆದ್ದರಿಂದ ಕೇವಲ ಅಲ್ಲಾಹನನ್ನೇ ಆರಾಧಿಸಬೇಕೆಂಬುದು ತತ್ವವಾಗಿದೆ. ಅದರ ವ್ಯಾವಹಾರಿಕ ರೂಪವಾದ ನಮಾಝ್, ಉಪವಾಸ, ಹಜ್ಜ್, ಇತ್ಯಾದಿಗಳು ಶರೀಅತ್ ಆಗಿವೆ. ಅವೆರಡೂ

ರ್ಮದ ತಾತ್ಪರ್ಯದಲ್ಲಿ ಸೇರಿವೆ. ಆರ್ಥಿಕ ರಂಗದಲ್ಲಿ ಕೇವಲ ಅಲ್ಲಾಹನ ಸಾರ್ವಭೌಮತೆ ತ್ತು ವ್ಯವಸ್ಥೆಯನ್ನು ಸ್ವೀಕರಿಸಬೇಕೆಂಬುದು ತತ್ವವಾಗಿದೆ. ಝಕಾತ್, ಬಡ್ಡಿ ನಿಷೇಧ, ಅಕ್ರಮ ಸ್ತಾನು, ಕಾಳ ಸಂತೆ, ಮೋಸ ವಂಚನೆ ಇತ್ಯಾದಿಗಳನ್ನು ತೊರೆಯುವುದು ಅದರ ್ಯವಹಾರಿಕ ರೂಪವಾಗಿದೆ. ಲೈಂಗಿಕ ಸದಾಚಾರ ರಂಗಗಳಲ್ಲಿ ಕಾನೂನು ನಿರ್ಮಾಣದ ರಮಾಧಿಕಾರವು ಅಲ್ಲಾಹನಿಗೆಂಬುದು ಧರ್ಮವಾಗಿದೆ. ವಿವಾಹ, ವಿವಾಹ ವಿಚ್ಛೇದನ, ಭಿಚಾರ ನಿಷೇಧ ಇತ್ಯಾದಿಗಳ ಬಗ್ಗೆ ನೀಡಲಾದ ನಿಯಮ-ನಿರ್ದೇಶಗಳು ಶರೀಅತ್ ಆಗಿವೆ. ೀವನದ ಇತರ ರಂಗಗಳ ಸ್ಥಿತಿಯೂ ಅಷ್ಟೇ.

ಆದ್ದರಿಂದ ಧರ್ಮವು ದೈವಿಕ ಜೀವನ ವ್ಯವಸ್ಥೆಯ ಮೂಲಾಧಾರವಾಗಿದೆ. ಶರೀಅತ್ ದರ ವ್ಯಾವಹಾರಿಕ ರೂಪವಾಗಿದೆ. ಹಾಗಾದರೆ ಧರ್ಮವು ಇಸ್ಲಾಮೀ ಜೀವನ ವ್ಯವಸ್ಥೆಯ ಸ್ಥಾಂತಿಕ ಬುನಾದಿಯಾಗಿದೆ. ಶರೀಅತ್ ಅದರ ಕರ್ಮ ವಿಧಾನವಾಗಿದೆ. ಅದ್ದೀನ್‌ನಲ್ಲಿ ವೆರಡೂ ಸೇರಿವೆ.

7. ಎಲ್ಲ ಪ್ರವಾದಿಗಳೂ ಬೋಧಿಸಿದ ಧರ್ಮ ಒಂದೇ ಆಗಿತ್ತು. ಅಲ್ಲಾಹನ ಜೀವನ ವಸ್ಥೆಯನ್ನು ಮಾತ್ರ ಅಂಗೀಕರಿಸಬೇಕು. ಅದು ಇಸ್ಲಾಮೀ ಜೀವನದ ಮೂಲಾಧಾರವಾಗಿದೆ. ದರೆ ವ್ಯಾವಹಾರಿಕ ಜೀವನದಲ್ಲಿ ಅದನ್ನು ಸಾಕ್ಷಾತ್ಕರಿಸುವ ಕಾನೂನು ನಿಬಂಧನೆಗಳು ಾವಾಗಲೂ ಒಂದೇ ಆಗಿರಲಿಲ್ಲ. ಅವುಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದವು ಅಥವಾ ೀಅತ್ ವಿವಿಧವಾಗಿದ್ದವು. ನಮಾಝ್, ಉಪವಾಸ, ಝಕಾತ್, ವಿವಾಹ, ಶಿಕ್ಷಾ ನಿಯಮ, ಮಾಜಿಕ ಶಿಷ್ಟಾಚಾರ, ಸಾಂಸ್ಕೃತಿಕ ಕಾನೂನು ಇತ್ಯಾದಿಗಳ ಬಗ್ಗೆ ಎಲ್ಲ ಪ್ರವಾದಿಗಳ ೂಲಕ ಅವತೀರ್ಣಗೊಂಡ ವಿಧಿ ವಿಧಾನಗಳು ಒಂದೇ ಆಗಿರಲಿಲ್ಲ. ಹಾಗಿದ್ದರೂ ಅಲ್ಲಾಹನ ೀವನ ವ್ಯವಸ್ಥೆಯನ್ನು ಅಂಗೀಕರಿಸಬೇಕೆಂಬ ಆಜ್ಞೆಯೊಂದಿಗೆ ಅದರ ವ್ಯಾವಹಾರಿಕ ಕ್ರಮಗಳನ್ನು ದರ ಎಲ್ಲ ಜನ ವಿಭಾಗಗಳಿಗೂ ನೀಡಲಾಗಿತ್ತು. ಅಲ್ಲಾಹನು ಹೇಳುತ್ತಾನೆ:

"ನಾವು ನಿಮ್ಮಲ್ಲಿ ಪ್ರತಿಯೊಂದು ಜನ ವಿಭಾಗಕ್ಕೆ ಒಂದು ಧರ್ಮ ಶಾಸ್ತ್ರ ಮತ್ತು ಂದು ಕರ್ಮ ಮಾರ್ಗವನ್ನು ನಿಶ್ಚಯಿಸಿದೆವು." (ಪವಿತ್ರ ಕುರ್‌ಆನ್,5: 48)

"ಪ್ರತಿಯೊಂದು ಸಮುದಾಯಕ್ಕೂ ನಾವು ಒಂದು ಉಪಾಸನಾ ಕ್ರಮವನ್ನು ಶ್ಚಯಿಸಿದ್ದೇವೆ. ಅದನ್ನು ಅದು ಅನುಸರಿಸುತ್ತದೆ." (ಪವಿತ್ರ ಕುರ್‌ಆನ್,22: 67)

ಆದ್ದರಿಂದ ಪ್ರತಿಯೋರ್ವ ಪ್ರವಾದಿಯೂ ಕೇವಲ ಅಲ್ಲಾಹನ ವ್ಯವಸ್ಥೆಗೆ ಬದ್ಧವಾಗಿ ೀವಿಸಬೇಕೆಂಬ 'ತತ್ವ'ವನ್ನು ಅಥವಾ 'ಧರ್ಮ'ವನ್ನು ಭೋಧಿಸಿದ್ದಾರೆ. ಅದರೊಂದಿಗೆ ತನ್ನ ಲಕ್ಕೆ ಅಲ್ಲಾಹನು ನೀಡಿದ ಅದರ ವ್ಯಾವಹಾರಿಕ ರೂಪವಾದ ಶರೀಅತ್ತನ್ನೂ ಜನರಿಗೆ ೀಸಿದ್ದರು. ಅಭೇದ್ಯವಾಗಿ ಬೆಸೆದಿರುವ ಅವೆರಡರ ಸಂಸ್ಥಾಪನೆಯೇ ಪ್ರವಾದಿಗಳ

ದೌತ್ಯವಾಗಿತ್ತು. ಆದ್ದರಿಂದ ಧರ್ಮವನ್ನು ಅಂಗೀಕರಿಸಿ ಶರೀಅತ್ತನ್ನು ತಿರಸ್ಕರಿಸುವ ಪ್ರಶ್ನೆಯೆ ಉದ್ಭವಿಸುವುದಿಲ್ಲ. ಶರೀಅತ್‌ಗೆ ಬದ್ಧನಾಗಿರುವೆನೆಂದು ಒಪ್ಪಿಕೊಳ್ಳುವುದೇ ಧರ್ಮ ಸ್ವೀಕಾರದ ತಾತ್ಪರ್ಯವಾಗಿದೆ. ಆದ್ದರಿಂದ ಪ್ರತಿಯೊಬ್ಬ ಪ್ರವಾದಿಯ ಕಾಲದ ಕಾನೂ ವ್ಯವಸ್ಥೆಯು(ಶರೀಅತ್) ಅವರು ಪ್ರಚಾರ ಮಾಡಿದ ಸತ್ಯ ಧರ್ಮದ ಭಾಗವೇ ಆಗಿ ಪ್ರವಾದಿ ಅಥವಾ ಅನುಯಾಯಿಗಳಿಗೆ ಅದನ್ನು ಬದಲಾಯಿಸುವ ಅನುಮತಿಯಿರಲಿಲ್ಲ.

8. ಮೇಲಿನ ವಿವರಣೆಗಳಿಂದ ಧರ್ಮದ ವ್ಯಾವಹಾರಿಕ ಕ್ರಮವೇ ಶರೀಅತ್ ಎಂ ಸುಸ್ಪಷ್ಟವಾಗುತ್ತದೆ. ಆದ್ದರಿಂದ ಶರೀಅತ್ ಕೂಡಾ ಧರ್ಮವೇ ಆಗಿದೆ. ಆದ್ದರಿಂದಲೇ ಅದ ಹಲವು ಅಂಶಗಳನ್ನು 'ಧರ್ಮ' ವೆಂದು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಚರ್ಯೆ ಪರಿಚಯ ಪಡಿಸಿದೆ. ಇದಕ್ಕೆ ಧಾರಾಳ ಉದಾಹರಣೆಗಳನ್ನು ನೀಡಬಹುದು. ಇಲ್ಲಿ ಕೆಲವನ್ನ ಮಾತ್ರ ಉದ್ಧರಿಸುತ್ತೇನೆ.

(i) ನಮಾಝ್ ಮತ್ತು ಝಕಾತನ್ನು ಕುರ್‌ಆನ್ ಧರ್ಮವೆಂದು ವಿವರಿಸಿದೆ: "ಆದರ ಇವರು ಪಶ್ಚಾತ್ತಾಪ ಪಟ್ಟರೆ, ನಮಾಝನ್ನು ಸಂಸ್ಥಾಪಿಸಿದರೆ ಮತ್ತು ಝಕಾತ್ ಕೊಟ್ಟ ನಿಮ್ಮ ಧರ್ಮ ಬಾಂಧವರಾಗಿರುತ್ತಾರೆ." (ಪವಿತ್ರ ಕುರ್‌ಆನ್,9: 1

"ಅವರು ತಮ್ಮ ಧರ್ಮವನ್ನು ನಿಷ್ಕಳಂಕವಾಗಿ ಅಲ್ಲಾಹನಿಗೆ ಮಾತ್ರ ಮೀಸಲಾಗಿಟ ಏಕ ನಿಷ್ಠೆಯಿಂದ ಆತನ ದಾಸ್ಯ ಮಾಡಬೇಕು. ನಮಾಝನ್ನು ಸಂಸ್ಥಾಪಿಸಬೇಕು ಮತ ಝಕಾತನ್ನು ನೀಡಬೇಕು. ಎಂಬುದರ ಹೊರತು ಬೇರೇನೂ ಆಗಿರಲಿಲ್ಲ. ಇದುವೇ ಅತ್ಯ ಸರಿಯಾದ ಧರ್ಮ" (ಪವಿತ್ರ ಕುರ್‌ಆನ್,98:

(ii) ಅನಾಥರನ್ನು ನಿರ್ಲಕ್ಷಿಸಿ, ನಿರ್ಗತಿಕರ ಹಕ್ಕುಗಳನ್ನು ನಿರಾಕರಿಸುವುದನ್ನು ಧರ್ಮ ನಿರಾಕರಣೆ ಎಂದು ಕುರ್‌ಆನ್ ಹೇಳಿದೆ.

"ಧರ್ಮವನ್ನು (ದೀನ್) ನಿರಾಕರಿಸುವವರನ್ನು ನೀವು ಕಂಡಿರಾ ಅವನೇ ಅನಾಥನನ ದೂರ ದಬ್ಬುವವನು ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನಾಗಿದ್ದಾನೆ.' (ಪವಿತ್ರ ಕುರ್‌ಆನ್,107: 1-

(iii) ರಾಷ್ಟ್ರವು ಅಪರಾಧಿಗಳಿಗೆ ನೀಡಬೇಕಾದ ಶಿಕ್ಷಾ ಕ್ರಮವನ್ನು ಕುರ್‌ಆನ್ ದೀ ಎಂದು ವಿಶ್ಲೇಷಿಸಿದೆ.

"ವ್ಯಭಿಚಾರಿ ಮತ್ತು ವ್ಯಭಿಚಾರಿಣಿ ಇವರಿಬ್ಬರಲ್ಲಿ ಪ್ರತಿಯೊಬ್ಬರಿಗೂ ನೂ ಛಡಿಯೇಟು ಕೊಡಿರಿ. ನೀವು ಅಲ್ಲಾಹನ ಹಾಗೂ ಅಂತಿಮ ದಿವಸದ ಮೇ ವಿಶ್ವಾಸವಿರಿಸುತ್ತೀರಾದರೆ ಅಲ್ಲಾಹನ ಧರ್ಮದ ವಿಷಯದಲ್ಲಿ ಅವರ ಮೇಲಿನ ಕನಿಕರ ನಿಮ್ಮನ್ನು ತಡೆಯದಿರಲಿ." (ಪವಿತ್ರ ಕುರ್‌ಆನ್,24:

(iv) ಶರೀಅತ್ ನಿಯಮಗಳನ್ನು ಅಭ್ಯಸಿಸುವುದನ್ನು 'ದೀನ್' ಕಲಿಯುವಿಕೆಯೆಂದು ರ್ಆನ್ ಹೇಳಿದೆ:

"ಇದ್ದ ಸತ್ಯ ವಿಶ್ವಾಸಿಗಳೆಲ್ಲರೂ ಹೊರಟು ಬಿಡುವ ಅಗತ್ಯವೇನೂ ಇರಲಿಲ್ಲ. ಆದರೆ ರ ವಾಸಸ್ಥಾನಗಳ ಪ್ರತಿಯೊಂದು ಭಾಗದಿಂದ ಕೆಲವರು ಹೊರಟು ಬಂದು ಧರ್ಮ ನವನ್ನು ಹೊಂದಿ ಹಿಂದಿರುಗಿ ಹೋಗಿ ತಮ್ಮ ಪ್ರದೇಶದ ನಿವಾಸಿಗಳಿಗೆ ಬೋಧನೆ ನೀಡಿ ು ಭಕ್ತಿ ಬೆಳೆಸಲಿಕ್ಕಾಗಿ" (ಪವಿತ್ರ ಕುರ್ಆನ್,9: 122)

(v) ಇಸ್ಲಾಮಿನ ರಾಜಕೀಯ ಅಧಿಕಾರವನ್ನು ಕುರ್ಆನ್ ಹಲವೆಡೆಗಳಲ್ಲಿ (ಧರ್ಮ)ವೆಂದು ್ಣಿಸಿದೆ:

"ಕ್ಷೋಭೆಯು ಸಂಪೂರ್ಣ ಅಳಿದು ಧರ್ಮವು ಸಂಪೂರ್ಣವಾಗಿ ಅಲ್ಲಾಹನಿಗೇ ುವವರೆಗೂ ನೀವು ಅವರ ವಿರುದ್ಧ ಹೋರಾಡಿರಿ" (ಪವಿತ್ರ ಕುರ್ಆನ್,2:193, 8:39)

ಇಲ್ಲಿ ಎಲ್ಲರೂ ಏಕದೇವ ವಿಶ್ವಾಸ ಮತ್ತು ಏಕ ದೇವಾರಾಧನೆಯನ್ನು ಅಂಗೀಕರಿಸುವ ಕ ಅವರೊಡನೆ ಹೋರಾಡಿರಿ ಎಂಬುದು ಇದರ ತಾತ್ಪರ್ಯವಲ್ಲ. ಬದಲಾಗಿ ದೈವಿಕ ರ್ವಭೌಮತೆಯು ಸ್ಥಾಪನೆಗೊಂಡು ಇಸ್ಲಾಮಿ ರಾಷ್ಟ್ರಕ್ಕೆ ಜನರು ವಿಧೇಯರಾಗುವ ತನಕ ಾಶಕಾರಿಗಳಾದ ವೈರಿಗಳೊಡನೆ ಹೋರಾಡಿರಿ ಎಂದಾಗಿದೆ.

(vi) ಆಹಾರ ಪಾನೀಯಗಳ ವಿಧಿ ನಿಷೇಧಗಳನ್ನು ವಿವರಿಸುತ್ತಾ ಶರೀಅತ್‌ನ ರ್ತೀರ್ಣವನ್ನು ಸಂಪೂರ್ಣಗೊಳಿಸಿದ ಕುರಿತು ಪವಿತ್ರ ಕುರ್ಆನ್ 'ಧರ್ಮ'ವನ್ನು ರ್ಣಗೊಳಿಸಲಾಯಿತೆಂದು ಹೇಳಿದೆ. "ನಿಮಗೆ ಇವು ನಿಷಿದ್ಧಗೊಳಿಸಲ್ಪಟ್ಟಿವೆ - ಶವ, ರಕ್ತ, ಂದಿಮಾಂಸ, ಅಲ್ಲಾಹನ ಹೊರತು ಇತರರ ಹೆಸರಲ್ಲಿ 'ದಿಬ್ಹ್' ಮಾಡಲ್ಪಟ್ಟ (ಚೂರಿ ಕಲ್ಪಟ್ಟ) ಪ್ರಾಣಿ, ಉಸಿರು ಕಟ್ಟಿ, ಪೆಟ್ಟುತಾಗಿ ಎತ್ತರದಿಂದ ಬಿದ್ದು ಘರ್ಷಿಸಲ್ಪಟ್ಟು ಅಥವಾ ್ರರ ಮೃಗದಿಂದ ಹರಿದು ಹಾಕಲ್ಪಟ್ಟ ಸತ್ತ ಪ್ರಾಣಿ, ಆದರೆ ನೀವು ಜೀವಂತ ಪಡೆದು ಬ್ಹ್' ಮಾಡಿದ ಪ್ರಾಣಿಯು ಇದಕ್ಕೆ ಹೊರತಾಗಿದೆ. ಯಾವುದಾದರೂ ಗುಡಿಯ ಮುಂದೆ ಿ ಕೊಡಲ್ಪಟ್ಟ ಪ್ರಾಣಿ, ಅಲ್ಲದೆ ಜೂಜಿನ ಮೂಲಕ ಅದೃಷ್ಟ ಪರೀಕ್ಷೆ ಮಾಡುವುದು ಇವೆಲ್ಲ ರ್ಮ ಭ್ರಷ್ಟತೆಯ ಕಾರ್ಯಗಳು. ಇಂದು ಸತ್ಯ ನಿಷೇಧಿಗಳಿಗೆ ನಿಮ್ಮ ಧರ್ಮದ ಬಗ್ಗೆ ಪೂರ್ಣ ನಿರಾಶೆಯುಂಟಾಗಿರುತ್ತದೆ. ಆದುದರಿಂದ ನೀವು ಅವರನ್ನು ಭಯಪಡಬೇಡಿರಿ. ನ್ನನ್ನು ಭಯಪಡಿರಿ. ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಂಪೂರ್ಣಗೊಳಿಸಿದ್ದೇನೆ. ನನ್ನ ಕೊಡುಗೆಯನ್ನು ನಿಮ್ಮ ಮೇಲೆ ಪೂರ್ಣಗೊಳಿಸಿದ್ದೇನೆ ತ್ತು ಇಸ್ಲಾಮನ್ನು ನಿಮ್ಮ ಧರ್ಮವೆಂಬ ನೆಲೆಯಲ್ಲಿ ಅಂಗೀಕರಿಸಿದ್ದೇನೆ. (ಆದುದರಿಂದ ಮಗೆ ವಿಧಿಸಿರುವ ಆಜ್ಞೆ ಮತ್ತು ನಿಷೇಧದ ನಿಯಮಗಳನ್ನು ಪಾಲಿಸಿರಿ.) ಆದರೆ ಪಾಪದ

ಕಡೆಗೆ ಒಲವಿಲ್ಲದೆ ಹಸಿವೆಯಿಂದ ವಿವಶವಾಗಿ ಯಾರಾದರೂ ಅವುಗಳಿಂದ ಸ್ವಲ್ಪ ತಿಂ ಬಿಟ್ಟರೆ, ಅಲ್ಲಾಹ್ ನಿಶ್ಚಯವಾಗಿಯೂ ಮಹಾ ಕ್ಷಮಾಶೀಲನೂ ಕರುಣಾನಿಧಿಯ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 5

(vii) ರಾಜಕೀಯ ಕಾನೂನುಗಳನ್ನು ಕುರ್‌ಆನ್ 'ಧರ್ಮ'ವೆಂದು ಪ್ರಸ್ತಾಪಿಸಿ "ಅಲ್ಲಾಹನೇ ಇಚ್ಛಿಸಿದ ವಿನಾ ರಾಜ ಧರ್ಮ (ಅರ್ಥಾತ್ ಈಜಿಪ್ಟಿನ ರಾಜ ಶಾಸನ)ದ ಪ್ರಕ ತಮ್ಮನನ್ನು ಹಿಡಿಯುವುದು ಅವರಿಗೆ ಯೋಗ್ಯವಾಗಿರಲಿಲ್ಲ." (ಪವಿತ್ರ ಕುರ್‌ಆನ್, 12:

(viii) ಶರೀಅತ್‌ನ ಭಾಗವಾಗಿರುವ ವಿವಾಹದ ಕುರಿತು ಪ್ರವಾದಿ(ಸ) ಹೀಗೆಂದಿದ್ದಾ "ವಿವಾಹವಾದರೆ ಒಬ್ಬನ ಧರ್ಮದ ಅರ್ಧಾಂಶ ಭರ್ತಿಯಾಗುತ್ತದೆ. ಉಳಿದ ಅರ್ಧಾಂಶದ ಆತನು ಅಲ್ಲಾಹನ ಭಯ ವಿರಿಸಿಕೊಳ್ಳಲಿ." (ಬೈಹ

9. ಭೂಮಿಯಲ್ಲಿ ಅಲ್ಲಾಹನ ಶಾಪ ಕೋಪಗಳಿಗೆ ಗುರಿಯಾಗಿ ನಾಶಗೊಳಿಸಲ್ಪ ಸಮುದಾಯಗಳ ಕಥೆಯನ್ನು ಕುರ್‌ಆನಿನಲ್ಲಿ ವಿವರಿಸಲಾಗಿದೆ. ಆ ಸಮುದಾಯಗ ಶರೀಅತನ್ನು ಪಾಲಿಸದೆ, ದೇವನನ್ನು ನಿರಾಕರಿಸಿ, ಪ್ರವಾದಿಗಳನ್ನು ಧಿಕ್ಕರಿಸಿದುದರಿಂದ ಶಿಕ್ಷೆ ಗುರಿಯಾಯಿತು. ಹೂದ್, ಸಾಲಿಹ್, ಶುಐಬ್, ಲೂತ್‌ರ(ಅ) ಜನಾಂಗಗಳ ನಾಶ ಇತಿಹಾಸವು ಇದಕ್ಕೆ ಸಾಕ್ಷಿಯಾಗಿದೆ. ಶನಿವಾರ ಮೀನು ಹಿಡಿಯಬಾರದೆಂಬ ಶರೀಅತ ಉಲ್ಲಂಘಿಸಿದ್ದಕ್ಕಾಗಿ ಇಸ್ರಾಈಲರು ಶಪಿಸಲ್ಪಟ್ಟರು.

ಒಟ್ಟಿನಲ್ಲಿ, ಪ್ರವಾದಿಗಳು ಬೋಧಿಸಿದ ವಿಶ್ವಾಸ ಮತ್ತು ಅದರ ವ್ಯಾವಹಾ ರೂಪವಾಗಿರುವ ಶರೀಅತ್‌ಗಳು ಧರ್ಮವಾಗಿದೆ. ದೇವ ವ್ಯವಸ್ಥೆಯ ಭಾಗವಾಗಿರುವ ಹಾ ಅದರ ಕಾರ್ಯ ರೂಪವಾಗಿರುವ ಶರೀಅತ್, ಪ್ರಸ್ತುತ ವ್ಯವಸ್ಥೆಯನ್ನು ಅನುಗಮಿಸಬೇಕೆಂ ಆದೇಶದ ಅನಿವಾರ್ಯ ಬೇಡಿಕೆಯಾಗಿದೆ. ಅವೆರಡೂ ಸೇರಿದ ಅದ್ದೀನನ್ನು ಸ್ಥಾಪಿಸಲಿಕ್ಕಾ ಎಲ್ಲ ಪ್ರವಾದಿಗಳನ್ನು ನೇಮಿಸಲಾಗಿತ್ತು. ಸತ್ಯವಿಶ್ವಾಸಿಗಳಿಗೂ ಅದನ್ನೇ ಆಜ್ಞಾಪಿಸಲಾಗಿ ಆದ್ದರಿಂದಲೇ ಜಮಾಅತೆ ಇಸ್ಲಾಮಿಯೂ ಇಕಾಮತುದ್ದೀನ್‌ನ್ನು ಧ್ಯೇಯವಾಗಿ ಅಂಗೀಕರಿಸಿ ಅದನ್ನು ಜಮಾಅತ್ ಸಂವಿಧಾನವು ಹೀಗೆ ವಿವರಿಸಿದೆ:

'ಇಕಾಮತುದ್ದೀನ್' ಎಂಬುದರಲ್ಲಿರುವ 'ದೀನ್'ನ ತಾತ್ಪರ್ಯವು ಜಗದೊಡೆಯನಾ ಅಲ್ಲಾಹನು ತನ್ನ ಸಕಲ ಪ್ರವಾದಿಗಳ ಮೂಲಕ ವಿವಿಧ ಕಾಲ ಮತ್ತು ದೇಶಗಳ ಕಳುಹಿಸುತ್ತಿದ್ದ, ಕೊನೆಗೆ ತನ್ನ ಅಂತಿಮ ಪ್ರವಾದಿಯಾದ ಮುಹಮ್ಮದ್‌ರ(ಸ) ಮೂ ಮಾನವರ ಮಾರ್ಗದರ್ಶನಕ್ಕಾಗಿ, ಅಂತಿಮ ಹಾಗೂ ಪರಿಪೂರ್ಣ ರೂಪದ ಅವತೀರ್ಣಗೊಳಿಸಿದಂತಹ ಸತ್ಯ ಧರ್ಮವಾಗಿದೆ. ಇಂದು ಲೋಕದಲ್ಲಿ ಪ್ರಾಮಾಣಿಕ ಮ ಸುರಕ್ಷಿತವಾಗಿರುವ ಹಾಗೂ ಅಲ್ಲಾಹನಲ್ಲಿ ಸ್ವೀಕಾರಾರ್ಹವಾಗಿ ಉಳಿದಿರುವ ಏಕೈಕ ಧರ್ಮ ಇದೊಂದು ಮಾತ್ರ. ಅದರ ಹೆಸರೇ ಇಸ್ಲಾಮ್.

ಆ ಧರ್ಮವು ಮಾನವನ ಅಂತರಂಗ-ಬಹಿರಂಗಗಳನ್ನು ಮಾನವ ಜೀವನದ ವೈಯಕ್ತಿಕ ೂ ಸಾಮೂಹಿಕ ಎಲ್ಲ ರಂಗಗಳನ್ನೂ ಒಳಗೊಂಡಿದೆ. ವಿಶ್ವಾಸ, ಆರಾಧನೆಗಳು ಮತ್ತು ನಡತೆಗಳಿಂದ ತೊಡಗಿ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕವೇ ಮೊದಲಾದ ಮಾನವ ನದ ಯಾವ ರಂಗವೂ ಅದರ ಪರಿಧಿಯ ಹೊರಗಿಲ್ಲ.

ಆ ಧರ್ಮವು ದೇವ ಸಂಪ್ರೀತಿ ಮತ್ತು ಪರಲೋಕ ವಿಜಯದ ಭರವಸೆ ನೀಡುವಂತೆಯೇ ಕ ಸಮಸ್ಯೆಗಳ ಸೂಕ್ತ ಪರಿಹಾರದ ಅತ್ಯುತ್ತಮವಾದ ಜೀವನ ಪದ್ಧತಿಯೂ ಆಗಿದೆ. ಶ್ರೇಷ್ಠ ೂ ಪ್ರಗತಿಶೀಲವಾದ ವೈಯಕ್ತಿಕ ಹಾಗೂ ಸಾಮಾಜಿಕ ಜೀವನದ ವ್ಯವಸ್ಥೆಯು ಇದರ ್ಥಾಪನೆಯಿಂದಲೇ ಸಾಧ್ಯ.

ಈ ಧರ್ಮದ 'ಇಕಾಮತ್' ಎಂಬುದರ ತಾತ್ಪರ್ಯವು ಯಾವುದೇ ವಿಧದ ವಿಂಗಡನೆ ್ತ ವಿಭಜನೆಯಿಲ್ಲದೆ, ಈ ಧರ್ಮವನ್ನು ಸಂಪೂರ್ಣವಾಗಿ ನಿಸ್ವಾರ್ಥತೆ ಮತ್ತು ಏಕಾಗ್ರತೆಯಿಂದ ಸರಿಸಿ ವ್ಯಕ್ತಿಯ ವಿಕಾಸ, ಸಮಾಜದ ನಿರ್ಮಾಣ ಮತ್ತು ರಾಷ್ಟ್ರದ ವ್ಯವಸ್ಥೆ ಎಲ್ಲವೂ ಈ ರ್ಕ್ಕೆ ಅನುರೂಪವಾಗಿರುವಂತೆ ಮಾನವ ಜೀವನದ ವೈಯಕ್ತಿಕ ಹಾಗೂ ಸಾಮಾಜಿಕವಾದ ರಂಗಗಳಲ್ಲಿಯೂ ಇದನ್ನು ಸಂಪೂರ್ಣವಾಗಿ ಜಾರಿಗೆ ತರುವುದಾಗಿದೆ.

ಈ ಧರ್ಮದ ಸಂಸ್ಥಾಪನೆಯ ಶ್ರೇಷ್ಠ ಹಾಗೂ ವ್ಯಾವಹಾರಿಕ ಮಾದರಿಯು ಹಮ್ಮದ್(ಸ) ಮತ್ತು ಖಿಲಫಾವುರ್ರಾಶಿದೀನ್ (ಸತ್ಯಸಂಧರಾದ ಖಲೀಫರು) ಸ್ಥಾಪಿಸಿ ರಿಸಿರುವುದಾಗಿದೆ. (ಪರಿಚ್ಛೇದ: 4)



# IX

# ಇಸ್ಲಾಮಿನ ಸಂದೇಶ ಪ್ರಚಾರ

**ಪ**ವಿತ್ರ ಕುರ್‌ಆನ್ ಪರಿಚಯಗೊಳಿಸಿದ ಹೆಚ್ಚಿನ ಪ್ರವಾದಿಗಳು, ಮುಸ್ಲಿಮೇತರ ಸಂದೇಶ ಪ್ರಚಾರ ನಿರ್ವಹಣೆಗಾಗಿಯೇ ಆಗಮಿಸಿದ್ದರು. ಆ ಪೈಕಿ ಹಲವು ಪ್ರವಾ ಸಂಬೋಧಿತರಿಗೆ ದೈವಿಕ ಸನ್ಮಾರ್ಗದ ಸಾಮಾನ್ಯ ಜ್ಞಾನವೂ ಇರಲಿಲ್ಲ. ಅವರು ಪರಂಪರಾಗತ ದೇವ ವಿಶ್ವಾಸಿಗಳು ಮತ್ತು ಧರ್ಮಾನುಯಾಯಿಗಳಾಗಿದ್ದರೂ ದೇವ ಧರ್ಮದ ಯಾ ವೈಶಿಷ್ಟ್ಯ ಅವರಲ್ಲಿ ಇರಲಿಲ್ಲ. ಪರಂಪರಾಗತವಾಗಿ ಅನುಸರಿಸುತ್ತಿದ್ದ ಆಚಾರಗಳಿಗೆ ಪ್ರವಾ ಸಂದೇಶದೊಂದಿಗೆ ದೂರದ ಸಂಬಂಧವೂ ಇರಲಿಲ್ಲ. ಆದ್ದರಿಂದ ಮುಸ್ಲಿಮೇತರ ಇಸ್ಲಾಮೀ ಪ್ರಚಾರ ನಡೆಸುವುದು ಬಹುಮಂದಿ ಪ್ರವಾದಿಗಳ ಕರ್ತವ್ಯವಾಗಿತ್ತು. ಮುಸ್ಲಿಮೇ ಸಮುದಾಯಗಳಿಗೆ ನೇಮಕಗೊಂಡ ಎಲ್ಲ ಪ್ರವಾದಿಗಳೂ ತಮಗೆ ನೀಡಲಾಗಿದ್ದ ಕರ್ತವ್ಯವನ್ನು ಸುಂದರವಾಗಿ ನಿರ್ವಹಿಸಿದ್ದರು.

ಇಲ್ಲಿ ಪ್ರವಾದಿಗಳ ಹಾದಿಯನ್ನು ಅನುಸರಿಸಿ ನಡೆಯುತ್ತಿರುವ ಜಮಾಅತೆ ಇಸ್ಲಾ ನಿರ್ವಹಿಸಬೇಕಾದ ಪ್ರಮುಖ ಕರ್ತವ್ಯವೂ ಅದೇ ಆಗಿದೆ. ದೇಶದ ಬಹುಸಂಖ್ಯಾತ ಪ್ರಜೆ ಇಸ್ಲಾಮಿನ ಕುರಿತು ಅಜ್ಞರಾಗಿದ್ದಾರೆ. ಮಾತ್ರವಲ್ಲ, ಅದರ ಬಗ್ಗೆ ಘೋರ ತಪ್ಪು ತಿಳುವ ಯನ್ನೂ ಹೊಂದಿದ್ದಾರೆ. ಆ ತಪ್ಪು ತಿಳುವಳಿಕೆಗಳು ಒಂದು ದಿನ ಹಠಾತ್ತನೆ ಉಂಟಾದುದ ಹಲವು ಐತಿಹಾಸಿಕ ಕಾರಣಗಳೂ ದೇಶದ ವಿಶಿಷ್ಟ ಪರಿಸ್ಥಿತಿಯೂ ಮುಸ್ಲಿಮ್ ಸಮುದಾ ಸ್ಥಿತಿಗತಿಗಳೂ ಅದಕ್ಕೆ ಕಾರಣವಾಗಿದೆ. ಆದ್ದರಿಂದ ಇಸ್ಲಾಮಿನ ಬಗ್ಗೆ ಮುಸ್ಲಿಮೇತರರಲ್ಲಿ ತಪ್ಪು ತಿಳುವಳಿಕೆಗಳನ್ನು ದೂರೀಕರಿಸಿ ಅವರಿಗೆ ದೈವಿಕ ಸನ್ಮಾರ್ಗವನ್ನು ತಲುಪಿಸುವುದ ಇಸ್ಲಾಮೀ ಆಂದೋಲನವು ಮಹತ್ತರ ಹೊಣೆಯೆಂದು ಪರಿಗಣಿಸಿ ಅದನ್ನು ವಹಿಸಿಕೊಂಡಿ

## ತೀವ್ರ ಬಿಕ್ಕಟ್ಟು

ಇಸ್ಲಾಮೀ ಪ್ರಚಾರ ರಂಗದಲ್ಲಿ ಯಾವ ಪ್ರವಾದಿಯೂ ಅನುಭವಿಸಿಲ್ಲದಂತಹ ತೀ ಬಿಕ್ಕಟ್ಟನ್ನು ಇಲ್ಲಿ ಆಂದೋಲನದ ಕಾರ್ಯಕರ್ತರು ಎದುರಿಸುತ್ತಿದ್ದಾರೆ. ಎಲ್ಲ ದ ಪ್ರವಾದಿಗಳೂ ತಮ್ಮ ಜನಾಂಗದಲ್ಲಿ ಪ್ರಚಾರ ಕಾರ್ಯ ನಡೆಸಿದ್ದರು. ಇನ್ನೊಂದರ್ಥ ಪ್ರಚಾರಕರು ಮತ್ತು ಸಂಬೋಧಿತರು ಒಂದೇ ಸಮುದಾಯದ ಭಾಗವಾಗಿದ್ದ ಸಂಬೋಧಿತರು ಸಮುದಾಯದ ವೈರಿಗಳು ಅಥವಾ ಜಾತಿ ವಿರೋಧಿಗಳಾಗಿರಲಿಲ್ಲ. ಅ ಅನ್ಯರೂ ಆಗಿರಲಿಲ್ಲ. ಆದ್ದರಿಂದ ಪ್ರವಾದಿಗಳಿಗೆ ತಮ್ಮ ಸಂಬೋಧಿತರನ್ನು '

ುದಾಯವೇ' ಎಂದು ಕರೆಯಲು ಯಾವ ಸಂಕೋಚವೂ ಇರಲಿಲ್ಲ. ಆಲಿಸುವ ಸಂಬೋಧಿತರಿಗೂ ಂದ ಮುಜುಗರವಾಗುತ್ತಿರಲಿಲ್ಲ. ಎಲ್ಲ ದೇವ ಪ್ರವಾದಿಗಳೂ ತಮ್ಮ ಸಂಬೋಧಿತರನ್ನು, ಕೌಮಿ (ನನ್ನ ಸಮುದಾಯವೇ) ಎಂದು ಕರೆಯುತ್ತಿದ್ದರೆಂದು ಪವಿತ್ರ ಕುರ್‌ಆನ್ ಸ್ಪಷ್ಟ ಪಿದೆ. ಅದು ಹೃದಯದ ಭಾಷೆಯಾಗಿದೆ. ಸಂಪೂರ್ಣ ಪ್ರೀತಿ-ವಾತ್ಸಲ್ಯ, ಅನುಕಂಪದ ನೆಯಿಂದ ಅದು ಮೂಡಿತ್ತು. ಸಂಬೋಧಿತರ ಬಗೆಗಿನ ಅಪಾರ ಹಿತಾಕಾಂಕ್ಷೆಯೇ ರಲ್ಲಿ ತುಂಬಿ ತುಳುಕುತ್ತಿತ್ತು. ಹಲವು ವರ್ಷಗಳವರೆಗೆ ನಿರಂತರ ಸಂದೇಶ ಪ್ರಚಾರ ಪಿದ ಬಳಿಕ ಸನ್ಮಾರ್ಗವನ್ನು ಸ್ವೀಕರಿಸದೆ ಸತ್ಯನಿಷೇಧದಲ್ಲಿಯೇ ದೃಢವಾಗಿ ನಿಂತ ಗಳನ್ನೂ ಪ್ರವಾದಿಗಳು, ನನ್ನ ಜನರೇ, ನನ್ನ ಸಮುದಾಯವೇ ಎಂದು ಮುಂತಾಗಿ ಬೋಧಿಸುತ್ತಿದ್ದರು "ನೂಹ್ ಹೇಳಿದರು: ಪ್ರಭೂ! ನಾನು ನನ್ನ ಜನತೆಯನ್ನು ಹಗಲಿರುಳೆನ್ನದೆ ನಿನು, ಆದರೆ ನನ್ನ ಕರೆಯು ಅವರ ಪಲಾಯನವನ್ನಷ್ಟೆ ಹೆಚ್ಚಿಸಿತು. ನೀವು ಅವರನ್ನು ಸುವಂತಾಗಲೆಂದು ನಾನು ಅವರನ್ನು ಕರೆದಾಗಲೆಲ್ಲ ಅವರು ಕಿವಿಗಳಲ್ಲಿ ಬೆರಳುಗಳನ್ನು ಕಿಸಿಕೊಂಡರು. ತಮ್ಮ ವಸ್ತ್ರಗಳಿಂದ ಮುಖ ಮುಚ್ಚಿಕೊಂಡರು. ಹಠಮಾರಿತನ ತೋರಿದರು ತ್ತು ಭಾರೀ ಅಹಂಭಾವ ತೋರಿಸಿದರು. ತರುವಾಯ ನಾನು ಅವರಿಗೆ ಬಹಿರಂಗವಾಗಿ ೊಟ್ಟೆನು. ಅನಂತರ ನಾನು ಘಂಟಾಘೋಷವಾಗಿ ಧರ್ಮಾಹ್ವಾನ ನೀಡಿದೆನು ಮತ್ತು ಸ್ಯವಾಗಿಯೂ ಸಮಜಾಯಿಸಿದೆನು." (ಪವಿತ್ರ ಕುರ್‌ಆನ್,71: 5-9)

ಆಶ್ರಯಕ್ಕಾಗಿ ತಾಯಿಫ್‌ಗೆ ಹೋದಾಗ ಪ್ರವಾದಿವರ್ಯರನ್ನು(ಸ) ಆ ಊರಿನ ಜನರು ಷ್ಕರಿಸಿ ಹೊಡೆದೋಡಿಸಿ ಅಪಮಾನಿಸಿದರು. ಅವರು ಮಾನಸಿಕ ಮತ್ತು ದೈಹಿಕ ನೋವಿನಿಂದ ್ರಾಂತಿ ಪಡೆಯುತ್ತಿದ್ದಾಗ, ತನ್ನನ್ನು ಹಿಂಸಿಸಿದ ತಾಯಿಫ್‌ನವರನ್ನು ದಂಡಿಸುವ ಅನುಮತಿ ದಾಗ ಪ್ರವಾದಿಯವರು(ಸ) ಅದನ್ನು ನಿರಾಕರಿಸಿ ಹೀಗೆ ಪ್ರಾರ್ಥಿಸಿದರು: "ಪ್ರಭೂ! ನನ್ನ ತೆಯನ್ನು ಕ್ಷಮಿಸಿಬಿಡು. ನನ್ನ ಜನತೆಗೆ ಸನ್ಮಾರ್ಗ ತೋರಿಸು."

ಆದರೆ ಭಾರತದಲ್ಲಿ ಕೌಮ್ ಎಂಬ ಪದವು ಮುಸ್ಲಿಮರ ಪರ್ಯಾಯವಾಗಿ ಬಿಟ್ಟಿದೆ. ು ಸಂಖ್ಯಾತ ದೇಶಬಾಂಧವರನ್ನು 'ನನ್ನ ಸಮುದಾಯವೇ' (ಯಾ ಕೌಮಿ) ಎಂದು ುಲಸಾಧ್ಯವಾದ ರೀತಿಯಲ್ಲಿ ನಮ್ಮ ಮತ್ತು ಅವರ ನಡುವೆ ಅಂತರವಿದೆ. ಅಥವಾ ಒಂದು ೆ ನಾವು ಹಾಗೆ ಕರೆದರೂ ಮುಸ್ಲಿಮೇತರ ಸಹೋದರರು ಅದನ್ನು ಆಲಿಸಲಾಗದ ಯಲ್ಲಿದ್ದಾರೆ. ಎಂಟು ಶತಮಾನಗಳ ಕಾಲ ಆದರ್ಶ ಪ್ರಾಯವೆಂದು ಹೇಳಲಾಗದ ಸ್ಲಿಮ್ ಆಡಳಿತ, ಬ್ರಿಟೀಷರ ಒಡೆದು ಆಳುವ ನೀತಿ, ಭಾರತ-ಪಾಕ್ ವಿಭಜನೆ, ಆ ಕ ಮತ್ತು ಈಗಲೂ ನಡೆಯುತ್ತಿರುವ ಕೋಮು ಗಲಭೆಗಳು ಇತ್ಯಾದಿ, ಮುಸ್ಲಿಮ್ ಮತ್ತು ಸ್ಲಿಮೇತರರ ನಡುವಣ ಅಂತರ ಹಾಗೂ ತಪ್ಪು ತಿಳುವಳಿಕೆಗಳನ್ನು ಹೆಚ್ಚಿಸಿವೆ. ಆದರೆ ು ಸೈದ್ಧಾಂತಿಕ ದ್ವೇಷವಲ್ಲ. ಇಲ್ಲಿ ಸಾಮುದಾಯಿಕ ಸ್ಪರ್ಧೆ ಮತ್ತು ಜಾತಿ ವಿರೋಧ

ತೀವ್ರವಾಗಿದೆ. ಗತ ಇತಿಹಾಸದಿಂದ ಬೆಳೆದು ಬಂದ ಈ ಅಂತರವು ಇಸ್ಲಾಮಿ ಪ್ರ ರಂಗದಲ್ಲಿ ಭಾರೀ ಆಘಾತ ಮತ್ತು ಬಿಕ್ಕಟ್ಟನ್ನು ಸೃಷ್ಟಿಸಿದೆ.

ಇಸ್ಲಾಮಿ ಸಂದೇಶ ಪ್ರಚಾರವನ್ನು ದೇಶ ಬಾಂಧವರು ಇಲ್ಲಿ ಗಂಭೀರ ಅಪಾರ್ಥ ಮಾಡಿಕೊಂಡಿದ್ದಾರೆ. ಅವರು ಅದನ್ನು ಮುಸ್ಲಿಮರ ಜನಬಲ ಹೆಚ್ಚಿಸಿ, ತನ್ಮೂ ಓಟು ಗಳಿಸಿ ಅಧಿಕಾರ ಗಳಿಸುವ ಮಾರ್ಗವೆಂದು ಭಾವಿಸಿದ್ದಾರೆ. ಇಸ್ಲಾಮ್, ಐಹಿಕ ಮತ್ತು ಪಾರತ್ರಿಕ ಮೋಕ್ಷದ ಹಾದಿ ಎಂಬ ಶಬ್ದವನ್ನೂ ಕೇಳಲು ಹೆಚ್ಚಿನವರು ಇ ಸಿದ್ಧರಿಲ್ಲ. ಏಕೆಂದರೆ, ಮುಸ್ಲಿಮರು ತಮ್ಮ ಹಿತೈಷಿಗಳೆಂದು ಪರಿಗಣಿಸಲು ಇಂದು ಮುಸ್ಲಿಮೇತ ಸಾಧ್ಯವಾಗುವುದಿಲ್ಲ. ಗಂಭೀರ ಅಂತರ ಮತ್ತು ತಪ್ಪುತಿಳುವಳಿಕೆ ಉಳಿದು ಕೊಂಡಿರುವ ಅದಕ್ಕೆ ಕಾರಣವಾಗಿದೆ.

## ಸೌಹಾರ್ದ ಸ್ಥಾಪನೆ

ವೈರಿಗಳಲ್ಲಿ ಸಂದೇಶ ಪ್ರಚಾರ ನಡೆಸುವುದು ಬಹಳ ಕಷ್ಟದ ಕೆಲಸ. ಹಲವ ಅದು ಅಸಾಧ್ಯವಾಗಿದೆ. ಪ್ರಚಾರಕ ಮತ್ತು ಸಂಬೋಧಿತರ ನಡುವಣ ಅಂತರವು, ಪ್ರಚಾ ಮಾತು ಮತ್ತು ಸಂಭೋಧಿತನ ಮನಸ್ಸಿನ ನಡುವೆ ಅಡ್ಡಗೋಡೆಯಾಗಿದೆ. ಶಾಂತ ವಾತಾವರಣದ ಸೌಹಾರ್ದಮಯ ವಾತಾವರಣದಲ್ಲಿ, ಶಾಂತಿಯುತವಾಗಿ ನಡೆಯುವ ಇಸ್ಲಾಮಿ ಪ್ರ ಮಾತ್ರ ಉಪಯುಕ್ತವಾದೀತು. ಆಗ ಮಾತ್ರ ಸಂಬೋಧಿತರು ಶ್ರದ್ಧೆಯಿಂದ ಆ ಗೌರವಿಸಬಹುದು. ಆ ಬಳಿಕ ಅವರು ಅದನ್ನು ಸ್ವೀಕರಿಸಲಿ ಅಥವಾ ತಿರಸ್ಕರಿಸಲಿ. ರಾಷ ಎಲ್ಲ ಮುಸ್ಲಿಮೇತರ ಸಹೋದರರಿಗೂ ಇಸ್ಲಾಮಿನ ಸಂದೇಶವನ್ನು ತಲುಪಿಸುವುದ ಇಸ್ಲಾಮಿ ಆಂದೋಲನವು ಅದರ ಹೊಣೆಯಾಗಿ ಅಂಗೀಕರಿಸಿದೆ. ಅದಕ್ಕೆ ರಾಷ್ಟ್ರದಲ್ಲಿರ ಕೋಮು ಸ್ಪರ್ಧೆ ಮತ್ತು ಅಂತರವು ಅತೀ ದೊಡ್ಡ ಅಡ್ಡಿಯಾಗಿದೆ. ಅದನ್ನು ನಿವಾರಿಸಿ ಸ್ನೇ ಸೌಹಾರ್ದ, ಪ್ರೀತಿ-ಮೈತ್ರಿಯ ವಾತಾವರಣ ಸೃಷ್ಟಿಸಬೇಕಾದುದು ಇಸ್ಲಾಮಿ ಸಂದ ಪ್ರಚಾರದ ಅನಿವಾರ್ಯತೆಯಾಗಿದೆ. ರಾಷ್ಟ್ರದ ಪ್ರತಿಯೋರ್ವ ಮುಸ್ಲಿಮೇತರನಿಗೂ ಇಸ್ಲಾ ಕಾರ್ಯಕರ್ತನು ಆಪ್ತ ಮತ್ತು ಹಿತೈಷಿಯೆಂದು ಮನವರಿಕೆಯಾಗಬೇಕು. ತನ್ನ ಬಗ್ಗೆ ಆ ಮತ್ತು ಹಿತಾಕಾಂಕ್ಷೆಯುಳ್ಳವನೆಂದು ಭಾಸವಾಗಬೇಕು.

ಶತಮಾನಗಳಿಂದ ಬೆಳೆದು ಬಂದ ಅಂತರ ಮತ್ತು ವಿರೋಧವನ್ನು ಕ್ಷಿಪ್ರವ ಅಳಿಸಲು ಸಾಧ್ಯವಿಲ್ಲ. ಅದಕ್ಕೆ ಪ್ರಾಮಾಣಿಕ ಪ್ರಯತ್ನ ಮತ್ತು ಧೋರಣೆಯ ಅಗತ್ಯವಿ ಅದಕ್ಕಾಗಿ ದೇಶ ಬಾಂಧವರೊಡನೆ ನಿಕಟ ಸಂಬಂಧ ಬೆಳೆಸಿ,ಸೌಹಾರ್ದ ಸ್ಥಾಪಿಸಬೇಕು. ಅ ಸುಖ ದುಃಖಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು. ಸಮಸ್ಯೆಗಳಲ್ಲಿ ಪ್ರಾಮಾಣಿಕ ಆ ತೋರಿಸಬೇಕು. ಹಿತಾಕಾಂಕ್ಷಿಯಾಗಿ ವರ್ತಿಸಬೇಕು. ಅವರ ಸಂಕಷ್ಟಗಳಲ್ಲಿ ನೆರವಾಗಬೇ

ಮೂಲಕ ಸಹೋದರ ಸಮುದಾಯಗಳೊಂದಿಗೆ ಪ್ರೀತಿ ಸೌಹಾರ್ದ ಸಹಬಾಳ್ವೆಯನ್ನು ಸಿಸ ಬಹುದಾಗಿದೆ.

ಈ ಉದ್ದೇಶಾರ್ಥ ಜಮಾಅತೆ ಇಸ್ಲಾಮಿಯು ವಿವಿಧ ಕಾರ್ಯಕ್ರಮಗಳನ್ನು ಪಿಸಿದೆ. ಮುಸ್ಲಿಮೇತರರು ಇಸ್ಲಾಮಿನ ಮೂಲ ಶಿಕ್ಷಣಗಳಾದ ಏಕದೇವತ್ವ, ಪ್ರವಾದಿತ್ವ, ರಲೋಕ ಜೀವನ ಹಾಗೂ ಅವುಗಳ ಪ್ರಾಥಮಿಕ ಬೇಡಿಕೆಗಳೇನೆಂಬುದನ್ನು ಯುವಂತಾಗಬೇಕು. ಇಸ್ಲಾಮ್ ಮಾತ್ರ ನ್ಯಾಯ ಮತ್ತು ಅನುಗ್ರಹದ ವ್ಯವಸ್ಥೆಯಾಗಿದೆ. ಕಿಕ ಯಶಸ್ಸು ಮತ್ತು ಪಾರಲೌಕಿಕ ಮೋಕ್ಷ ತನ್ನ ಸೃಷ್ಟಿಕರ್ತ ಮತ್ತು ಪ್ರಭುವಿನ ಮಾಣಿಕ ದಾಸ್ಯಾರಾಧನೆ ಮಾಡುವುದರಲ್ಲಿದೆ ಎಂದು ಅವರಿಗೆ ಸ್ಪಷ್ಟವಾಗಬೇಕು. ಹುದೇವಾರಾಧನೆ, ನಾಸ್ತಿಕತೆ ಮತ್ತಿತರ ಮಿಥ್ಯ ವಿಚಾರ, ವಿಶ್ವಾಸ ಮತ್ತು ನೈತಿಕ ಕುಗಳಲ್ಲಿರುವ ದೋಷವನ್ನು ಅವರು ಚೆನ್ನಾಗಿ ಅರಿಯುವಂತಾಗಬೇಕು. ಅಲ್ಲದೇ ಸ್ಲಾಮ್, ಮುಸ್ಲಿಮರು ಮತ್ತು ಇಸ್ಲಾಮಿ ಆಂದೋಲನದ ಬಗ್ಗೆ ಅವರಲ್ಲಿರುವ ತಪ್ಪುಕಲ್ಪನೆ ತ್ತು ಅಪನಂಬಿಕೆಗಳು ದೂರವಾಗಬೇಕು. ಇದನ್ನು ಜಮಾಅತೆ ಇಸ್ಲಾಮಿ ಧೋರಣೆ ಮತ್ತು ರ್ಯಕ್ರಮದಲ್ಲಿ (ಪರಿಚ್ಛೇದ 1) ಸ್ಪಷ್ಟ ಪಡಿಸಲಾಗಿದೆ.

ಪ್ರಸ್ತುತ ಧ್ಯೇಯ ಸಾಧನೆಗಾಗಿ ಜಮಾಅತೆ ಇಸ್ಲಾಮಿಯು ದೇಶದ ಹೆಚ್ಚಿನೆಲ್ಲ ಷೆಗಳಲ್ಲಿಯೂ ಪುಸ್ತಕಗಳನ್ನು ಪ್ರಕಟಿಸಿ ಪ್ರಚಾರ ಮಾಡುತ್ತಿದೆ. ಇಸ್ಲಾಮಿನ ತತ್ವಾದರ್ಶಗಳನ್ನು ಸುವ ಕಿರು ಹೊತ್ತಗೆಗಳು, ಚಾರ್ಟ್, ಸ್ಟಿಕ್ಕರ್, ಆಡಿಯೋ, ವೀಡಿಯೋ ಕ್ಯಾಸೆಟ್ ತ್ಯಾದಿಗಳನ್ನು ತಯಾರಿಸಿ ಪ್ರಚಾರ ಮಾಡುತ್ತಿದೆ. ದೇಶದ ನೈತಿಕ, ಸಾಮಾಜಿಕ ಸುಧಾರಣೆಗಳಲ್ಲಿ ಸ್ಲಾಮ್ ಬೀರಿದ ಪ್ರಭಾವಗಳ ಕುರಿತು ವಿಚಾರ ಸಂಕಿರಣ, ಚರ್ಚಾ ಗೋಷ್ಠಿಗಳನ್ನು ರ್ಪಡಿಸುತ್ತಿದೆ. ಧಾರ್ಮಿಕ ಸಂವಾದಗಳನ್ನು ಜರಗಿಸುತ್ತಿದೆ. ಸಮಾಜದ ವಿವಿಧ ರಂಗಗಳಲ್ಲಿರುವ ವರೊಡನೆ ನಿರಂತರ ಸಂಬಂಧ ಸ್ಥಾಪಿಸಲಾಗುತ್ತಿದೆ. ಸೌಹಾರ್ದ ಕೂಟಗಳೂ ಈ ರ್ಯಕ್ರಮಗಳಲ್ಲಿ ಸೇರಿವೆ. ಇಂತಹ ಚಟುವಟಿಕೆಗಳಿಂದ ಭಾರತೀಯ ಸಮಾಜದಲ್ಲಿ ಸ್ಲಾಮ್, ಮುಸ್ಲಿಮರು ಮತ್ತು ಇಸ್ಲಾಮಿ ಆಂದೋಲನದ ಬಗೆಗಿನ ತಪ್ಪು ಕಲ್ಪನೆಗಳನ್ನು ವಾರಿಸಿ ಅವರಲ್ಲಿ ಇಸ್ಲಾಮಿ ಸಂದೇಶ ಪ್ರಚಾರ ಕಾರ್ಯವನ್ನು ನಡೆಸುತ್ತಿದೆ.



# X

# ಸಮುದಾಯ ಸುಧಾರಣೆ

ಮುಸ್ಲಿಮರು ಒಂದು ಆದರ್ಶ ಸಮಾಜವಾಗಿದ್ದಾರೆ. ಎಲ್ಲ ಮಾನವರಿ ಮಾದರಿಯಾಗಬೇಕಾದಂತಹ ಉತ್ತಮ ಸಮುದಾಯ. ಸತ್ಯ ಮತ್ತು ಸನ್ಮಾಗ ಸಾಕ್ಷಿಯಾಗಬೇಕಾದವರು. ಅಲ್ಲಾಹನು ಹೇಳಿದ್ದಾನೆ: "ನೀವು ಜನರ ಸನ್ಮಾರ್ಗದರ್ಶನ ಮ ಸಂಸ್ಕಾರಗಳಿಗಾಗಿ ನೇಮಕಗೊಂಡ ಉತ್ತಮ ಸಮುದಾಯವಾಗಿದ್ದೀರಿ. ನೀವು ಒಳಿ ಆದೇಶವನ್ನು ನೀಡುತ್ತೀರಿ. ಪಾಪ ಕಾರ್ಯಗಳಿಂದ ತಡೆಯುತ್ತೀರಿ. ಅಲ್ಲಾಹನ ವಿಶ್ವಾಸವಿಡುತ್ತೀರಿ." (ಪವಿತ್ರ ಕುರ್‌ಆನ್,3: 1

"ನಿಮ್ಮಲ್ಲಿ ಸತ್ಕರ್ಮದ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮ ಕೆಡುಕುಗಳಿಂದ ತಡೆಯುವ ಜನ ಕೂಟವೊಂದು ಇರಬೇಕಾದುದು ಅತ್ಯಗತ್ಯ."

(ಪವಿತ್ರ ಕುರ್‌ಆನ್,3: 1

"ಹೀಗೆ ನಾವು ನಿಮ್ಮನ್ನು ಸುಮಧ್ಯ ಸಮುದಾಯವನ್ನಾಗಿ ಮಾಡಿದ್ದೇವೆ. ನಿ ಜಗತ್ತಿನ ಮಾನವರ ಮಧ್ಯೆ ಸಾಕ್ಷಿಯಾಗಲಿಕ್ಕಾಗಿ ಮತ್ತು ಸಂದೇಶವಾಹಕರು ನಿಮ್ಮ ಸಾಕ್ಷಿಯಾಗಿರಲಿಕ್ಕಾಗಿ." (ಪವಿತ್ರ ಕುರ್‌ಆನ್,2: 1

"ಸತ್ಯ ವಿಶ್ವಾಸಿಗಳೇ, ನೀವು ನ್ಯಾಯ ಪಾಲಿಸುವವರೂ ಅಲ್ಲಾಹನಿಗಾಗಿ ಸಾ ವಹಿಸುವವರೂ ಆಗಿರಿ." (ಪವಿತ್ರ ಕುರ್‌ಆನ್,4: 1

"ಸತ್ಯ ವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ನೆಲೆಗೊಳ್ಳುವವರೂ ನ್ಯಾಯದ ಸಾ ವಹಿಸುವವರೂ ಆಗಿರಿ." (ಪವಿತ್ರ ಕುರ್‌ಆನ್,5:

"ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕಾದ ರೀತಿಯಲ್ಲಿ ಹೋರಾಡಿರಿ. ಅವ ತನ್ನ ಕಾರ್ಯಕ್ಕಾಗಿ ನಿಮ್ಮನ್ನು ಆರಿಸಿ ಕೊಂಡಿರುತ್ತಾನೆ. ಮತ್ತು ಧರ್ಮದಲ್ಲಿ ನಿಮಗೇ ಸಂಕೀರ್ಣತೆಯಿರಿಸಿಲ್ಲ. ನಿಮ್ಮ ಪಿತಾಮಹರಾದ ಇಬ್‌ರಾಹೀಮರ ಸಮುದಾಯದ ಸ್ಥಿರವಾಗಿರಿ. ಅಲ್ಲಾಹನು ಮೊದಲೂ ನಿಮ್ಮ ಹೆಸರನ್ನು 'ಮುಸ್ಲಿಮ್' ಎಂದಿಟ್ಟಿದ್ದನು ಮ ಇದರಲ್ಲೂ(ಕುರ್‌ಆನಿನಲ್ಲಿಯೂ ನಿಮಗೆ ಅದೇ ಹೆಸರಿದೆ.) ಇದು ಸಂದೇಶವಾಹಕರು ನಿ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ ಮತ್ತು ನೀವು ಜನರ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ (ಆಗಿರುತ್ತ ಆದುದರಿಂದ ನಮಾಝನ್ನು ಸಂಸ್ಥಾಪಿಸಿರಿ. ಝಕಾತ್ ಕೊಡಿರಿ ಮತ್ತು ಅಲ್ಲಾಹನೊ

ಬಂಧ ಸ್ಥಾಪಿಸಿಕೊಂಡಿರಿ. ಅವನೇ ನಿಮ್ಮ ರಕ್ಷಕ ಮಿತ್ರ. ಅತ್ಯಂತ ಶ್ರೇಷ್ಠ ರಕ್ಷಕ ಮಿತ್ರನವನು ತ್ತು ಅತ್ಯುತ್ತಮ ಸಹಾಯಕನವನು." (ಪವಿತ್ರ ಕುರ್‌ಆನ್,22: 78)

ಮುಸ್ಲಿಮರು ಮಾದರಿ ಸಮುದಾಯವಾಗಬೇಕೆಂದು ಇಸ್ಲಾಮ್ ಆದೇಶಿಸಿದೆ. ಅವರ ತು ಮತ್ತು ಕೃತಿಯು ಸತ್ಯದ ಸಾಕ್ಷಿಯಾಗಬೇಕು. ಅವರನ್ನು ಅದಕ್ಕಾಗಿಯೇ ನಿಯೋಗಿಸಲಾಗಿದೆ. ನವರ ಇಹಪರ ವಿಜಯವನ್ನು ಖಚಿತ ಪಡಿಸುವ ಏಕ ಸತ್ಯ ಹಾದಿಯು ಇಸ್ಲಾಮೆಂದು ಸ್ಲಿಮರಿಗೂ ಜಗತ್ತಿಗೂ ಮನವರಿಕೆಯಾಗಬೇಕು.

ಆದರೆ, ನಾವು ಒಂದು ಆದರ್ಶ ಸಮುದಾಯ ಮತ್ತು ಪ್ರಚಾರಕ ತಂಡವೆಂಬ ಸ್ತವಿಕತೆಯನ್ನು ಇಂದು ಮುಸ್ಲಿಮರು ಸಂಪೂರ್ಣವಾಗಿ ಮರೆತು ಬಿಟ್ಟಿದ್ದಾರೆ. ಅವರು ದು ಪರಂಪರಾಗತ ಜನಾಂಗವಾಗಿ ಮಾರ್ಪಟ್ಟಿದ್ದಾರೆ. ಅವರ ಜೀವನವು ಸತ್ಯದ ಸಾಕ್ಷ್ಯ ಸುವುದಿಲ್ಲ. ಆ ಜೀವನದ ಬಹುತೇಕ ರಂಗಗಳನ್ನು ಜಾಹಿಲಿಯ್ಯತ್ ಆವರಿಸಿಕೊಂಡಿದೆ. ರಲ್ಲಿ ಇಸ್ಲಾಮೇತರ ಆಚಾರಗಳು ಸೇರಿ ಕೊಂಡಿವೆ. ಆದ್ದರಿಂದ ಅವರ ಸ್ಥಿತಿಯು ಸ್ಲಿಮೇತರರಿಗಿಂತ ಭಿನ್ನವಲ್ಲ. ಸತ್ಯವು ವ್ಯಕ್ತವಾಗಿಲ್ಲದಿರುವುದರಿಂದ, ಬಹುವಂಶ ಮುಸ್ಲಿಮರು ್ಯ ನಿಷೇಧಿ(ಕಾಫಿರ್)ಗಳಲ್ಲ. ಆದರೆ ಮುಸ್ಲಿಮರಲ್ಲಿ ಹಲವರು ಮುಸ್ಲಿಮ್ ಕುಟುಂಬಗಳಲ್ಲಿ ಟ್ಟಿ ಬೆಳೆದಿದ್ದು ಸತ್ಯ ವ್ಯಕ್ತವಾಗಿದ್ದರೂ ಅದನ್ನು ಮನಃಪೂರ್ವಕ ಸ್ವೀಕರಿಸದಿರುವುದರಿಂದ ್ಯ ನಿಷೇಧಿಗಳೆಂಬ ಹೆಸರಿಗೆ ಅರ್ಹರಾಗಿದ್ದಾರೆ. ಕೆಲವರು ಸತ್ಯವನ್ನು ಸ್ವೀಕರಿಸಿ ಕೈ ಟ್ಟಿರುವುದರಿಂದ ಸತ್ಯ ನಿಷೇಧಿಗಳು(ಕಾಫಿರ್) ಮತ್ತು ಧರ್ಮಭ್ರಷ್ಟ(ಮುರ್ತದ್)ರಾಗಿದ್ದಾರೆ. ಸ್ಲಿಮರೆಂದು ಹೇಳಿಕೊಳ್ಳುವ ಹಲವರು ಇಸ್ಲಾಮಿ ಜೀವನವನ್ನು ನಿರ್ಲಕ್ಷಿಸಿರುವುದರಿಂದ ಟ ವಿಶ್ವಾಸಿ(ಮುನಾಫಿಕ್)ಗಳಾಗಿದ್ದಾರೆ. ಮುಸ್ಲಿಮ್ ಸಮಾಜದಲ್ಲಿರುವ ಅಂತಹ ಸಹೋದರರನ್ನು ಪ ಇಸ್ಲಾಮಿಗೆ ಮರಳಿಸಬೇಕಾಗಿದೆ. ಹೀಗೆ ಅವರನ್ನು ನರಕದಿಂದ ರಕ್ಷಿಸಿ ಸ್ವರ್ಗಕ್ಕೆ ರ್ಹರನ್ನಾಗಿ ಮಾಡಬೇಕು.

ಭಾರತೀಯ ಜನತೆಯ ಮುಂದೆ ಇಲ್ಲಿನ ಮುಸ್ಲಿಮರು ಇಸ್ಲಾಮಿನ ಪ್ರತಿನಿಧಿಗಳಾಗಿದ್ದಾರೆ. ರದೃಷ್ಟವಶಾತ್, ಅವರು ಇಸ್ಲಾಮನ್ನು ಯಥಾವತ್ತಾಗಿ ಗ್ರಹಿಸುವ ಬದಲಾಗಿ ಅದರ ಬಗ್ಗೆ ಪ್ಪು ತಿಳುವಳಿಕೆ ಮೂಡಿಸಲು ಕಾರಣರಾಗಿದ್ದಾರೆ. ಮೂಢನಂಬಿಕೆ, ಕಂದಾಚಾರ, ಶಿರ್ಕ್, ರ್ಮಿಕ ಅಪರಾಧ, ಸಾಮಾಜಿಕ ಕೆಡುಕು, ಅನಾಚಾರ, ನೈತಿಕ ಅಧಃಪತನ, ರಾಜಕೀಯ ಪರಾಧ ಇತ್ಯಾದಿಗಳಿಂದ ಮುಸ್ಲಿಮರು ಇಂದು ಮುಕ್ತರಾಗಿಲ್ಲ. ಆದ್ದರಿಂದಲೇ ಅಲ್ಲಾಹನ ತ್ಯದ ಹಾದಿಯನ್ನು ದೇಶ ಬಾಂಧವರ ಮುಂದೆ ವಸ್ತುನಿಷ್ಠವಾಗಿ ಸಮರ್ಪಿಸಲು ಸಮಕಾಲೀನ ಸ್ಲಿಮರಿಗೆ ಸಾಧ್ಯವಾಗುತ್ತಿಲ್ಲ. ಮಾತ್ರವಲ್ಲ, ಇಸ್ಲಾಮಿನ ಬಗ್ಗೆ ಹಗೆತನ ಮತ್ತು ಕೀಳು ವನೆ ಬೆಳೆಯುವ ಅವಕಾಶ ಒದಗಿಸುತ್ತಿದ್ದಾರೆ.

ಭಾರತದ ಜಮಾಅತೆ ಇಸ್ಲಾಮಿಯು ಸ್ವ ಸಮುದಾಯದ ದುರವಸ್ಥೆಯ ಸಂಪೂರ್ಣವಾಗಿ ಅರಿತಿದೆ. ಅದನ್ನು ಕೊನೆಗಾಣಿಸಬೇಕೆಂದು ಪ್ರಾಮಾಣಿಕವಾಗಿ ಬಯಸುತ್ತಿ ಆದ್ದರಿಂದ ಮುಸ್ಲಿಮರ ಜೀವನವನ್ನು ಇಸ್ಲಾಮೀ ಬುನಾದಿಯಲ್ಲಿ ಪುನರ್ರಚಿಸುವ ಸುಧಾರ ಚಟುವಟಿಕೆಗಳಿಗೆ (ಇಸ್ಲಾಹಿ) ಅದು ಪ್ರಮುಖ ಸ್ಥಾನ ನೀಡಿದೆ. ಮುಸ್ಲಿಮರಲ್ಲಿರುವ ಇಸ್ಲಾಮೇತರ ಸಂಪ್ರದಾಯಗಳನ್ನು ಕೊನೆಗೊಳಿಸಲು ಪ್ರಯತ್ನಿಸುತ್ತಿದೆ. ಸಮುದಾಯ ಕೆಲವೊಂದು ಕುಂದು ಕೊರತೆಗಳನ್ನು ಮಾತ್ರ ಗಮನದಲ್ಲಿರಿಸಿ ಕೆಲಸ ಮಾಡಿದರೆ ಅದು ಆಂ ಸುಧಾರಣಾ ಕಾರ್ಯವೆನಿಸುವುದು. ಉದಾ: ಮುಸ್ಲಿಮರಲ್ಲಿರುವ ಬಡ್ಡಿ, ಕಾಳ ಸಂತೆ, ಲ ಹಾಗೂ ಇತರ ಸಾಮಾಜಿಕ ಕೆಡುಕುಗಳು ಮತ್ತು ರಾಜಕೀಯ ಅಪರಾಧಗಳನ್ನು ನಿರ್ಲಕ್ಷಿ ಅವರಲ್ಲಿರುವ ಮೂಢನಂಬಿಕೆ, ಅನಾಚಾರ ಇತ್ಯಾದಿಗಳನ್ನು ಮಾತ್ರ ವಿರೋಧಿಸಿ ಕೆ ಮಾಡಿದರೆ ಅದು ಆಂಶಿಕ ಸುಧಾರಣಾ ಕಾರ್ಯ (ಇಸ್ಲಾಹ್) ಆಗುತ್ತದೆ. ಅದೇ ರೀತಿ ಆರ್ಥಿ ರಂಗ, ಶೈಕ್ಷಣಿಕ ರಂಗಕ್ಕೆ ಸಂಬಂಧಿಸಿದ ಚಟುವಟಿಕೆಗಳೂ ಆಂಶಿಕ ಸುಧಾರಣಾ ಶ್ರಮಗಳಾ ಆದರೆ ಸಮಕಾಲೀನ ಮುಸ್ಲಿಮ್ ಸಮುದಾಯದಲ್ಲಿ ಸಮಗ್ರ ಸುಧಾರಣಾ ಕಾರ್ಯಗಳ ನಡೆಸುವ ಅಗತ್ಯವಿದೆ. ಯಾಕೆಂದರೆ ಜೀವನದ ಎಲ್ಲ ರಂಗಗಳಲ್ಲಿಯೂ ಜಾಹಿಲಿಯ್ಯತ್ ಮ ಶಿಥಿಲತೆ ವ್ಯಾಪಿಸಿದೆ. ಶುದ್ಧ ಧಾರ್ಮಿಕ ಕಲ್ಪನೆಗಳಿಗೂ ಹಾನಿಯಾಗಿದೆ. ವಿಶ್ವಾಸದ ಪಾವಿ ನಷ್ಟವಾಗಿದೆ. ಲೌಕಿಕ ಸಿದ್ಧಾಂತ ಮತ್ತು ವಿಚಾರ ಧಾರೆಗಳು ಜೀವನದ ದೃಷ್ಟಿಕೋನದ ಕಳಂಕ ಮತ್ತು ಕಾಪಟ್ಯವನ್ನು ಬೆರೆಸಿದೆ. ಈ ಕಾರಣಗಳಿಂದಾಗಿ ಭಾರತೀಯ ಮುಸ್ಲಿ ಜೀವನದ ಎಲ್ಲ ರಂಗಗಳಲ್ಲಿಯೂ ಸುಧಾರಣೆ ಅಗತ್ಯವಾಗಿದೆ. ಜಮಾಅತೆ ಇಸ್ಲಾಮಿ ಈ ವಿಷಯಕ್ಕೆ ಹೆಚ್ಚಿನ ಒತ್ತು ನೀಡಿದೆ.

ಲೌಕಿಕ ತತ್ವ ಸಿದ್ಧಾಂತ ಮತ್ತು ಆಂದೋಲನಗಳ ಮೆರುಗಿನಿಂದ ವಂಚಿತರ ಸಮುದಾಯ ನಾಯಕರೂ ಧರ್ಮ ವಿದ್ವಾಂಸರೂ ಕೀಳರಿಮೆಗೆ ಗುರಿಯಾಗಿದ್ದಾರೆ. ಆದ್ದರಿ ಅವರು ಪರಾಜಿತ ಮನೋಭಾವ ಮತ್ತು ಕ್ಷಮಾಪಣೆಯ ಧಾಟಿಯಲ್ಲಿ ಮಾತಾಡ ತೊಡಗಿದ ಇದು ಮುಸ್ಲಿಮ್ ಜನ ಸಾಮಾನ್ಯರಲ್ಲಿ ತೀವ್ರ ನಿರಾಶೆ ಮತ್ತು ಆಶಾಭಂಗ ಮೂಡಿಸಿ ಆದ್ದರಿಂದ ಅವರು ಸಾಮೂಹಿಕವಾಗಿ ಲೌಕಿಕ ಆಂದೋಲನಗಳಲ್ಲಿ ಸೇರಿದರು. ಅ ತಡೆಯೊಡ್ಡುವುದಕ್ಕೆ ಜಮಾಅತೆ ಇಸ್ಲಾಮಿಯು ಆದ್ಯ ಗಮನ ನೀಡಿತು. ಅದು ಲೌಕಿಕ ತ ಸಿದ್ಧಾಂತಗಳ ಪೊಳ್ಳುತನ ಮತ್ತು ದೌರ್ಬಲ್ಯಗಳನ್ನು ಅನಾವರಣಗೊಳಿಸಿತು. ಭಂಡವಾಳಶಾ ಕಮ್ಯೂನಿಝಮ್, ಸೋಶಿಯಲಿಝಮ್, ನ್ಯಾಶನಲಿಝಮ್ ಮುಂತಾದ ತತ್ವ ಸಿದ್ಧಾಂತಗ ಮಾನವ ಕುಲವನ್ನು ರಕ್ಷಿಸಲು ಸಾಧ್ಯವಿಲ್ಲವೆಂದು ಸ್ಪಷ್ಟೀಕರಿಸಿತು. ಇತರೆಲ್ಲವುಗಳಿಗಿಂತ ಸವ ಮತ್ತು ಸಮರ್ಥವಾದ ತತ್ವ ಶಾಸ್ತ್ರ ಎಂಬ ನೆಲೆಯಲ್ಲಿ ಇಸ್ಲಾಮನ್ನು ಪರಿಚಯ ಪಡಿಸಿ ಹೀಗೆ ಸಹಸ್ರಾರು ಯುವಕರನ್ನು ನಾಸ್ತಿಕತೆ, ಧರ್ಮರಾಹಿತ್ಯ ಮತ್ತು ಲೌಕಿಕ ಆಂದೋಲನ ಹಿಡಿತದಿಂದ ಮುಕ್ತಗೊಳಿಸಲು ಜಮಾಅತೆ ಇಸ್ಲಾಮಿಗೆ ಸಾಧ್ಯವಾಯಿತು. ಅದರೊಂ

ರ್ಮ ವಿದ್ವಾಂಸರು ಮತ್ತು ಸಮುದಾಯ ನಾಯಕರಲ್ಲಿ ಸ್ವಾಭಿಮಾನ ಮತ್ತು ಔನ್ನತ್ಯ
ಜ್ಞೆಯ ಬೆಳವಣಿಗೆಗೆ ಅದರಿಂದ ಪ್ರೇರಣೆ ದೊರೆಯಿತು.

ವಿಭಜನೆಯ ಬಳಿಕ ಭಾರತದಲ್ಲಿ ಉಳಿದ ಮುಸ್ಲಿಮರಲ್ಲಿ ಭಯ-ಭೀತಿ ಮತ್ತು ನಿರಾಶೆ ೂಡಿತು. ಅದು ಲಕ್ಷಾಂತರ ಮಂದಿಯನ್ನು ಆಂಶಿಕವಾಗಿ ಮತ್ತು ಸಂಪೂರ್ಣವಾಗಿ ರ್ಮಭ್ರಷ್ಟರನ್ನಾಗಿ ಮಾಡಿತು. ಅಂತಹ ಮಂದಿಯನ್ನು ಇಸ್ಲಾಮಿಗೆ ಮರಳಿಸುವ ತ್ರಾಸದಾಯಕ ಸವನ್ನು ಜಮಾಅತೆ ಇಸ್ಲಾಮಿಯು 50-60ರ ದಶಕಗಳಲ್ಲಿ ವಿಶೇಷವಾಗಿ ಉತ್ತರ ಾರತದಲ್ಲಿ ನಿರ್ವಹಿಸಿತು. ಸಹಸ್ರಗಟ್ಟಲೆ ಧರ್ಮ ಭ್ರಷ್ಟರನ್ನು ಸತ್ಯದ ಹಾದಿಗೆ ತಿರುಗಿಸಲು, ಕ್ಷಾಂತರ ಮುಸ್ಲಿಮರನ್ನು ಧರ್ಮ ತ್ಯಾಗದಿಂದ ತಡೆಯಲು ದೇವಾನುಗ್ರಹದಿಂದ ಜಮಾಅತೆ ಸ್ಲಾಮಿಗೆ ಸಾಧ್ಯವಾಗಿದೆ. ಅವರಲ್ಲಿ ಸ್ವಾಭಿಮಾನ ಮತ್ತು ಆತ್ಮ ವಿಶ್ವಾಸವನ್ನು ಬೆಳೆಸಿ, ಂತ ವಿಶ್ವಾಸ ಮತ್ತು ಸಂಸ್ಕೃತಿಯಲ್ಲಿ ಅವರನ್ನು ಸುದೃಢಗೊಳಿಸಿತು.

ಹಾಗಿದ್ದರೂ, ಬಹುವಂಶ ಮುಸ್ಲಿಮರು ಇಂದಿಗೂ ಒಂದು ಆದರ್ಶ ಸಮಾಜ ಥವಾ ಪ್ರಚಾರಕ ತಂಡವಾಗಿ ಮಾರ್ಪಟ್ಟಿಲ್ಲ. ಮಾತ್ರವಲ್ಲ, ಸಮುದಾಯವು ಇಂದಿಗೂ ರಬಿ ನಾಮವಿರುವ ಒಂದು ಜನ ಕೂಟವಾಗಿದೆ. ಅದರ ಸ್ವರೂಪವು ಬಹಳ ವಿಚಿತ್ರವಾಗಿದೆ. ಸ್ತಿಕವಾದಿಯಾದ ಮುಸ್ಲಿಮ್, ನಮಾಝ್ ಮಾಡದ ಮುಸ್ಲಿಮ್, ಮದ್ಯಪಾನಿಯಾದ ುಸ್ಲಿಮ್, ವ್ಯಭಿಚಾರಿಯಾಗಿರುವ ಮುಸ್ಲಿಮ್, ಕೊಲೆ ಸುಲಿಗೆ ನಡೆಸುವ ಮುಸ್ಲಿಮ್ ತ್ಯಾದಿಗಳು ಪ್ರಚಲಿತ ಸಮುದಾಯದ ಭಾಗವಾಗಿದೆ. ಅದೇ ವೇಳೆ ಅವರಲ್ಲಿ ಬಹು ಮಂದಿ ಜ ಇಸ್ಲಾಮಿನ ಕುರಿತು ಸಂಪೂರ್ಣ ಅಜ್ಞರಾಗಿದ್ದಾರೆ. ಆದ್ದರಿಂದ ಜಮಾಅತೆ ಇಸ್ಲಾಮಿಯು ುಸ್ಲಿಮ್ ಸಹೋದರ ಸಹೋದರಿಯರಿಗೆ ಇಸ್ಲಾಮಿನ ನೈಜ ತಿಳುವಳಿಕೆ ನೀಡಿ ಇಸ್ಲಾಮೀ ಶ್ವಾಸ ಮತ್ತು ಬೋಧನೆಗಳ ವಸ್ತು ಸ್ಥಿತಿಯ ಬಗ್ಗೆ ದೃಢ ಪ್ರಜ್ಞೆ ಮೂಡಿಸಿ, ಅವರನ್ನು ರ್ಮನಿಷ್ಠರನ್ನಾಗಿ ಮಾಡುವ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತ ಗೊಳಿಸುತ್ತಿದೆ. ದಕ್ಕಾಗಿ ಕುರ್‌ಆನ್, ಹದೀಸ್ ತರಗತಿಗಳು, ವಿವಿಧ ವಿಷಯಗಳ ಬಗ್ಗೆ ಚರ್ಚಾಗೋಷ್ಠಿ, ಧ್ಯಯನ ಶಿಬಿರಗಳನ್ನು ಏರ್ಪಡಿಸುತ್ತಿದೆ.

ಬಹುದೇವತ್ವ, ಅನಾಚಾರ, ಇಸ್ಲಾಮೇತರ ಸಂಪ್ರದಾಯ, ದುಂದು ವೆಚ್ಚ, ನೈತಿಕ ಕುಗಳು ಇತ್ಯಾದಿಗಳಿಂದ ಮುಸ್ಲಿಮರನ್ನು ವಿಮೋಚನೆಗೊಳಿಸಿ ಅವರಲ್ಲಿ ಹರಾಮ್ ಾಲ್‌ಗಳ ತಿಳುವಳಿಕೆ ಮತ್ತು ಭಯ ಭಕ್ತಿ ಮೂಡಿಸಲು ಜಮಾಅತೆ ಇಸ್ಲಾಮೀ ಯತ್ನಿಸುತ್ತಿದೆ. ಮದ್ಯ, ಬಡ್ಡಿ, ಲಾಟರಿ ಮುಂತಾದ ದುಷ್ಟ ಆರ್ಥಿಕ ಮಾರ್ಗಗಳಿಂದ ರವಿರಲು ಅದು ಪ್ರೇರೇಪಿಸುತ್ತಿದೆ. ಅದಕ್ಕಾಗಿ ವೈಯಕ್ತಿಕ ಸಂಭಾಷಣೆ, ತಂಡಗಳಲ್ಲಿ ಭೇಟಿ, ರ್ಚಾಕೂಟ, ಸಾರ್ವಜನಿಕ ಸಭೆಗಳನ್ನು ಏರ್ಪಡಿಸುತ್ತಿದೆ. ಜುಮಾ ಖುತ್‌ಬಾಗಳನ್ನೂ ಹಲ್ಲಾ ಸಭೆಗಳನ್ನೂ ಅದಕ್ಕಾಗಿ ಬಳಸುತ್ತಿದೆ. ಪತ್ರಿಕೆ, ನಿಯತಕಾಲಿಕ, ಪುಸ್ತಕಗಳನ್ನು

ಪ್ರಕಟಿಸಿ ಪ್ರಚಾರ ಮಾಡುತ್ತಿದೆ. ಚಾರ್ಟ್ ಬೋರ್ಡ್‌ಗಳನ್ನು ಪ್ರದರ್ಶಿಸುತ್ತಿದೆ. ಚರ್ಚಾಗೋ ವಿಚಾರ ಸಂಕಿರಣಗಳನ್ನು ಜರಗಿಸುತ್ತದೆ. ವಾಚನಾಲಯ, ಗ್ರಂಥಾಲಯ, ಸಂಚಾರಿ ಗ್ರಂಥಾಲ ಆಡಿಯೋ-ವೀಡಿಯೋ ಕ್ಯಾಸೆಟ್ ಲೈಬ್ರರಿಗಳನ್ನು ಸ್ಥಾಪಿಸುತ್ತಿದೆ. ಮುಂದಿನ ಪೀಳಿಗೆ ಇಸ್ಲಾಮಿ ವಿದ್ಯಾಭ್ಯಾಸ ಮತ್ತು ನೀತಿ ನಡುವಳಿಕೆಗಾಗಿ ವಿವಿಧ ಮಟ್ಟದ ಶಿಕ್ಷಣ ಸಂಸ್ಥೆಗಳ ದೇಶದ ನಾನಾ ಕಡೆಗಳಲ್ಲಿ ನಡೆಸುತ್ತಿದೆ. ಅದರೊಂದಿಗೆ ಉನ್ನತ ಶಿಕ್ಷಣ ಸಂಸ್ಥೆ ಆಶ್ರಯದಲ್ಲಿ ಇಸ್ಲಾಮಿ ಸ್ವಭಾವದ ಹಾಸ್ಟೆಲ್‌ಗಳನ್ನು ನಡೆಸುತ್ತಿದೆ. ಭಾರತದ ಎಲ್ಲ ಪ್ರಮು ಭಾಷೆಗಳಲ್ಲಿಯೂ ಕುರ್‌ಆನ್ ಅನುವಾದ ಗ್ರಂಥಗಳನ್ನು ಪ್ರಕಾಶನ ಗೊಳಿಸಿದೆ. ದೇಶ ವಿವಿಧ ಭಾಷೆಗಳಲ್ಲಿ ಪತ್ರಿಕೆ, ನಿಯತಕಾಲಿಕ ಮತ್ತು ಪುಸ್ತಕಗಳನ್ನು ಪ್ರಕಟಿಸಿ ಪ್ರಚ ಮಾಡುತ್ತಿದೆ. ಹೀಗೆ ವಿವಿಧ ಮಾರ್ಗಗಳಿಂದ ಮುಸ್ಲಿಮ್ ಸಮಾಜದ ಸಮಗ್ರ ಸುಧಾರ ಮತ್ತು ಇಸ್ಲಾಮೀಕರಣಕ್ಕಾಗಿ ಜಮಾಅತೆ ಇಸ್ಲಾಮಿ ಶ್ರಮಿಸುತ್ತಿದೆ.

## ಧಾರ್ಮಿಕ ಸಂಘಟನೆಗಳೊಂದಿಗಿನ ಧೋರಣೆ

ಜಮಾಅತೆ ಇಸ್ಲಾಮಿಯು ಇತರ ಮುಸ್ಲಿಮ್ ಸಂಘಟನೆಗಳೊಡನೆ ಸಹಕಾರ ಮ ಇಸ್ಲಾಮಿ ಸಹೋದರತೆಯ ಧೋರಣೆಯನ್ನು ಅವಲಂಬಿಸಿದೆ. ಅವು ನಿರ್ವಹಿಸುತ್ತಿರು ಹಲವು ಕಾರ್ಯಗಳು ಧರ್ಮ ಸಂಸ್ಥಾಪನೆಗೆ ಪೂರಕವಾದವುಗಳೆಂದೇ ಜಮಾಅತೆ ಇಸ್ಲಾ ಭಾವಿಸುತ್ತಿದೆ.

ಜಮಾಅತೆ ಇಸ್ಲಾಮಿಯಂತೆ ತೌಹೀದ್‌ನ ಸಮಗ್ರತೆ ಮತ್ತು ಇಸ್ಲಾಮಿ ಸಂಪೂರ್ಣತೆಯನ್ನು ಅಂಗೀಕರಿಸಿ ಇಕಾಮತುದ್ದೀನನ್ನು ಗುರಿಯಾಗಿರಿಸಿರುವ ಬೇರೊಂ ಸಂಘಟನೆ ಭಾರತದಲ್ಲಿಲ್ಲ. ಆದ್ದರಿಂದಲೇ ಇಲ್ಲಿನ ಮುಸ್ಲಿಮ್ ಸಂಘಟನೆಗಳು ಜಮಾಅತ್ ಸಮಾನಾಂತರ (Parallel Organisation) ಸಂಘಟನೆಗಳಾಗಿಲ್ಲ. ಸಹೋದರ ಅಥ ಸಹಾಯಕ ಸಂಘಟನೆಗಳಾಗಿವೆ.

ಮುಸ್ಲಿಮರಲ್ಲಿ ಅಂಟಿಕೊಂಡಿರುವ ಮೂಢನಂಬಿಕೆ ಮತ್ತು ಅನಾಚಾರ ನಿರ್ಮೂಲನಕ್ಕಾಗಿ ಪ್ರಯತ್ನಿಸುವವರು ಜಮಾಅತೆ ಇಸ್ಲಾಮಿಯ ಕಾರ್ಯ ಚಟುವಟಿಕೆ ದ್ವಿತೀಯ ಭಾಗವಾಗಿರುವ ಮುಸ್ಲಿಮರ ಸಮಗ್ರ ಸುಧಾರಣೆಯ ಒಂದಂಶಕ್ಕೆ ಮಾತ್ರ ಒ ನೀಡುತ್ತಿದ್ದಾರೆ. ಆದ್ದರಿಂದಲೇ ಅದು ಜಮಾಅತ್ ವಹಿಸಿಕೊಂಡ ಧ್ಯೇಯ ಸಾಧ ಸಹಾಯಕವಾಗಿದೆ. ಆದ್ದರಿಂದ ಆ ರಂಗದಲ್ಲಿ ಅವರೊಂದಿಗೆ ಸಹಕರಿಸಿ ಒಗ್ಗಟ್ಟಿನಿ ಕಾರ್ಯನಿರ್ವಹಿಸಲು ಜಮಾಅತ್ ಸಿದ್ಧವಾಗಿದೆ. ಆದರೆ ಕೇವಲ ಅದು ಮಾತ್ರ ಭಾರ ಇಸ್ಲಾಮಿ ಸಮಾಜವು ನಿರ್ವಹಿಸಬೇಕಾದ ಹೊಣೆಯೆಂದು ಭಾವಿಸುವುದು ಸರಿಯಲ್ಲ. ಅ ಮುಸ್ಲಿಮ್ ಸಮುದಾಯ ನಿರ್ವಹಿಸ ಬೇಕಾದ ಹೊಣೆಯ ಒಂದಂಶ ಮಾತ್ರವಾಗಿದೆ.

ುವಟಿಕೆ ಸಂಪೂರ್ಣ ಯಶಸ್ವಿಯಾದರೂ ಇಸ್ಲಾಹೀ ಚಟುವಟಿಕೆಗಳನ್ನು ಸಂಪೂರ್ಣಗೊಳಿಸಿ ಸ್ಲಿಮರು ಆದರ್ಶ ಪ್ರಾಯವಾದ ಉತ್ತಮ ಸಮುದಾಯವಾಗಿ ಮಾರ್ಪಡಲು ಆ ಬಳಿಕವೂ ಏದೂರ ಸಾಗಬೇಕಾಗಿದೆ. ಅನಾಚಾರಗಳ ನಿರ್ಮೂಲನದೊಂದಿಗೆ ಕೌಟುಂಬಿಕ, ಸಾಮಾಜಿಕ, ್ಥಿಕ, ಸಾಂಸ್ಕೃತಿಕ, ರಾಜಕೀಯ ಇತ್ಯಾದಿ ಎಲ್ಲ ರಂಗಗಳಲ್ಲಿಯೂ ಇಸ್ಲಾಮೀ ಆಚಾರ ತ್ತು ನಿಯಯಮಗಳನ್ನು ಜಾರಿಗೊಳಿಸಬೇಕಾಗಿದೆ. ಅನಾಚಾರ ಮತ್ತು ಮೂಢನಂಬಿಕೆಗಳ ರ್ಮೂಲನವು ಆ ಮಟ್ಟಿಗೆ ಉತ್ತಮವೇ. ಆದರೆ ಕೇವಲ ಅದರಿಂದ ಸಮುದಾಯವು ತ್ತಮ ಮತ್ತು ಅನುಕರಣೀಯವಾಗುವುದಿಲ್ಲ. ಅದಕ್ಕಾಗಿ ಉಚ್ಚಾಟಿತ ಮೂಢನಂಬಿಕೆ, ಾಚಾರಗಳ ಸ್ಥಾನದಲ್ಲಿ ಶ್ರೇಷ್ಠ ಇಸ್ಲಾಮೀ ಆಚಾರ ಮತ್ತು ಜೀವನ ಚರ್ಯೆಗಳನ್ನು ಢಿಸಬೇಕು.

ಹಾಗೆಯೇ ಮುಸ್ಲಿಮರಿಗೆ ಆರಾಧನಾ ಕರ್ಮಗಳಲ್ಲಿ ನಿಷ್ಠೆ ಬೆಳೆಯುವಂತೆ ಯತ್ನಿಸುವವರೂ ಸಮುದಾಯದ ಶೈಕ್ಷಣಿಕ ಪ್ರಗತಿಗಾಗಿ ಶ್ರಮಿಸುವವರೂ, ಆರ್ಥಿಕ ಾವೃದ್ಧಿಗಾಗಿ ಪರಿಶ್ರಮಿಸುವವರೂ ಸಮುದಾಯದ ಕೆಲವು ವಿಶಿಷ್ಟ ಅಂಶಗಳಿಗೆ ಒತ್ತು ನೀಡಿ ಷ್ಕರಣೆ ಮತ್ತು ಸುಧಾರಣಾ ಕಾರ್ಯಗಳನ್ನು ನಡೆಸುತ್ತಿದ್ದಾರೆ. ಇಕಾಮತುದ್ದೀನ್‌ನ ಕ್ಷಾತ್ಕಾರಕ್ಕೆ ಅಂತಹ ಚಟುವಟಿಕೆಗಳು ಅನಿವಾರ್ಯವಾಗಿವೆ. ಆದ್ದರಿಂದ ಅಂತಹ ುವಟಿಕೆಗಳನ್ನು ಜಮಾಅತೆ ಇಸ್ಲಾಮಿಯು ತುಚ್ಛ ಅಥವಾ ನಗಣ್ಯವೆಂದು ಪರಿಗಣಿಸುವುದಿಲ್ಲ. ್ರ ಸಮುದಾಯ ಸುಧಾರಣೆಗೆ ಸೂಕ್ತ ಹೆಜ್ಜೆಗಳಾಗಿವೆ. ಇಕಾಮತುದ್ದೀನ್‌ಗಾಗಿ ಜಮಾಅತ್ ುಸಿಕೊಂಡ ದ್ವಿತೀಯ ಕಾರ್ಯಕ್ರಮದ ಕೆಲವು ಅಂಶಗಳು. ಹೀಗೆ ಧ್ಯೇಯ ಸಾಧನೆಗೆ ರಕವಾದ ಚಟುವಟಿಕೆಗಳಲ್ಲಿ ನಿರತವಾದ ಸಹೋದರ ಸಂಘಟನೆಗಳ ಜತೆ ಗರಿಷ್ಠ ಕರಿಸಲು ಜಮಾಅತೆ ಇಸ್ಲಾಮೀ ಪ್ರಯತ್ನಿಸುತ್ತಿದೆ. ಆದರೆ ಅದಕ್ಕೆ ಸೂಕ್ತ ಗಮನ ಅಥವಾ ಕಾಶ ನೀಡಲ್ಪಡುತ್ತಿಲ್ಲ. ಪ್ರಜ್ಞಾವಂತ ಪ್ರಯತ್ನದಿಂದ ಈ ಸ್ಥಿತಿಯನ್ನು ಬದಲಾಯಿಸಬೇಕಾಗಿದೆ. ಮಾಅತ್ ಕಾರ್ಯಕರ್ತರು ತಮ್ಮ ನಿಲುಮೆಯಲ್ಲಿ ಅದಕ್ಕೆ ಪೂರಕವಾದ ಬದಲಾವಣೆಯನ್ನು ಡಿ ಕೊಳ್ಳಬೇಕು. ಹೀಗೆ ಇಸ್ಲಾಮೀ ಸಹೋದರತೆಯ ದಿಗಂತ ಸೀಮೆಯನ್ನು ವಿಸ್ತರಿಸಲು ಯತ್ನಿಸಬೇಕು.



# XI

# ಜಮಾಅತೆ ಇಸ್ಲಾಮಿ ಮತ್ತು ಸಮುದಾಯ ಸಂರಕ್ಷಣೆ

ಇಂದು ಭಾರತದ ಪರಿಸ್ಥಿತಿಯು ಪವಿತ್ರ ಕುರ್‌ಆನ್ ಪರಿಚಯ ಪಡಿಸಿದ ಪ್ರವಾದಿ ಕಾಲದ ಪರಿಸ್ಥಿತಿಗಳಿಗಿಂತ ತೀರಾ ಭಿನ್ನವಾಗಿದೆ. ಭಾರತದ ಸ್ಥಿತಿಯು ಅಲ್ಲಾಹನ ಅಂತಿ ಪ್ರವಾದಿ ಮುಹಮ್ಮದ್(ಸ) ಮಕ್ಕಾ ಅಥವಾ ಮದೀನಾ ಕಾಲ ಘಟ್ಟಕ್ಕೆ ಸಮಾನವಾಗಿ

ಮಕ್ಕಾದಲ್ಲಿ ಒಂದು ಪರಂಪರಾಗತ ಮುಸ್ಲಿಮ್ ಸಮಾಜ ಅಸ್ತಿತ್ವದಲ್ಲಿರಲಿಲ್ಲ. ಶರೀಅತ್ ಅವತೀರ್ಣಗೊಂಡಿರಲಿಲ್ಲ. ಆದ್ದರಿಂದ ವಿಶ್ವಾಸದ ಬದಲಾವಣೆಯಿಂದ ಜೀ ಕ್ರಮಗಳಲ್ಲಾಗುವ ವ್ಯತ್ಯಾಸವು ಇಂದಿನಷ್ಟು ಸಂಕೀರ್ಣ ಅಥವಾ ವ್ಯಾಪಕವಾಗಿರಲಿ ಶರೀಅತ್‌ನ ಸಂರಕ್ಷಣೆಯೂ ಅಷ್ಟೆ. ಮಕ್ಕಾದಲ್ಲಿ ಗೋತ್ರ ವ್ಯವಸ್ಥೆಯಿದ್ದಿತು. ಅದು ವಿ ರೀತಿಯಲ್ಲಿ ಕೆಟ್ಟಿದ್ದರೂ ಪ್ರಚಾರಕರಿಗೆ ಭದ್ರತೆ ಒದಗಿಸುವ ನಿಟ್ಟಿನಲ್ಲಿ ಗಮನಾರ್ಹ ಪ ವಹಿಸಿತ್ತು. ಭಾರತೀಯ ಹಿನ್ನೆಲೆಯು ಅವುಗಳಿಗಿಂತ ತೀರಾ ಭಿನ್ನವಾಗಿದೆ.

ಮದೀನದಲ್ಲಿ ಇಸ್ಲಾಮಿ ಸಮಾಜ ಮತ್ತು ರಾಷ್ಟ್ರ ಸ್ಥಾಪನೆಗೊಂಡಿತ್ತು. ಪ್ರವಾದಿಯ (ಸ) ಅದರ ನಾಯಕರಾಗಿದ್ದರು. ಇಸ್ಲಾಮಿ ವ್ಯವಸ್ಥೆಯನ್ನು ಜಾರಿಗೊಳಿಸಬಹುದಾ ಅಂತಹ ಪರಿಸ್ಥಿತಿಯನ್ನು ಭಾರತೀಯ ಹಿನ್ನೆಲೆಯೊಂದಿಗೆ ಹೋಲಿಸುವಂತಿಲ್ಲ.

ಕುರ್‌ಆನ್ ಪರಿಚಯ ಪಡಿಸಿದ ಪ್ರವಾದಿಗಳನ್ನು ಸಾಮಾನ್ಯವಾಗಿ ಮೂರು ವರ್ಗಗ ವಿಂಗಡಿಸಬಹುದು.

1. ಮುಸ್ಲಿಮೇತರರಿಗೆ ನೇಮಕಗೊಂಡ ಪ್ರವಾದಿಗಳು: ಅವರಿಗೆ ಮುಸ್ಲಿಮೇತರ ಸತ್ಯ ಸಂದೇಶ ಬೋಧಿಸುವ ಹೊಣೆಯನ್ನು ನೀಡಲಾಗಿತ್ತು. ಪ್ರವಾದಿ ನೂಹ್, ಹೂ ಸಾಲಿಹ್, ಇಬ್ರಾಹೀಮ್(ಅ) ಈ ವರ್ಗಕ್ಕೆ ಸೇರಿದವರಾಗಿದ್ದಾರೆ.

2. ಮುಸ್ಲಿಮ್ ಸಮುದಾಯಕ್ಕೆ ನೇಮಕಗೊಂಡ ಪ್ರವಾದಿಗಳು: ಸಮುದಾಯ ಇಸ್ಲಾಮಿ ನಾಯಕತ್ವ ನೀಡಿ ಅವರಲ್ಲಿ ಶರೀಅತ್ ಜಾರಿಗೊಳಿಸುವುದೇ ಇವರ ಹೊಣೆಯಾಗಿ ಪ್ರವಾದಿ ಝಕರಿಯ್ಯಾ, ಯಹ್ಯಾ, ದಾವೂದ್, ಸುಲೈಮಾನ್(ಅ) ಈ ವರ್ಗಕ್ಕೆ ಸೇರಿದವರಾಗಿದ್ದಾ

3. ಪರಂಪರಾಗತ ಮುಸ್ಲಿಮರೂ ಮುಸ್ಲಿಮೇತರರೂ ಸಮ್ಮಿಶ್ರವಾಗಿ ಬಾಳುವಂ ಸಮಾಜಕ್ಕೆ ನೇಮಕಗೊಂಡ ಪ್ರವಾದಿಗಳು: ಉದಾ: ಮೂಸಾ(ಅ). ಇಸ್ರಾಈಲರು ಅಲ

ರಂಪರಾಗತ ಮುಸ್ಲಿಮರಾಗಿದ್ದರು. ಕಿಬ್ತಿಗಳು ಮುಸ್ಲಿಮೇತರರು. ಯಾವುದಾದರೂ ಪ್ರವಾದಿಯ ಾವುದಾದರೂ ಕಾಲಘಟ್ಟವನ್ನು ಭಾರತೀಯ ಮುಸ್ಲಿಮರ ಸ್ಥಿತಿಗೆ ಹೋಲಿಸುವುದಿದ್ದರೆ ವಾದಿ ಮೂಸಾರ (ಅ) ಕಾಲದ ಈಜಿಪ್ಟ್‌ನ ಇಸ್ರಾಈಲರಿಗೆ ಅದು ಹೆಚ್ಚು ಹತ್ತಿರವಾಗಿದೆ. ವರಿಗೆ ಭಾರತೀಯ ಮುಸ್ಲಿಮರೊಂದಿಗೆ ಹಲವು ಸಾಮ್ಯತೆಗಳಿವೆ.

1. ಕೀರ್ತಿ ಪಡೆದ ಭೂತಕಾಲ: ಇಸ್ರಾಈಲರ ಪೂರ್ವಜರು ಪ್ರವಾದಿಗಳು ಮತ್ತು ಡಳಿತಗಾರರಾಗಿದ್ದರು. ಭಾರತೀಯ ಮುಸ್ಲಿಮರ ಪೂರ್ವಜರೂ ಇಲ್ಲಿ ಶತಮಾನಗಳ ಕಾಲ ಡಳಿತ ನಡೆಸಿದ್ದರು.

2. ವಿದೇಶಿಯರೆಂಬ ಆರೋಪ: ಇಸ್ರಾಈಲರ ಪೂರ್ವಜರು ಕನ್‌ಅನ್ ಪ್ರದೇಶದಿಂದ ುದವರಾದ್ದರಿಂದ ಪರಕೀಯರೆಂಬ ಆರೋಪಕ್ಕೆ ಗುರಿಯಾಗಿದ್ದರು.

3. ಅವರು ಕ್ರೂರ ಹಿಂಸೆ ಮತ್ತು ಮರ್ದನಕ್ಕೆ ಗುರಿಯಾಗಿದ್ದರು. ನಾವೇ ಃಶವಾಸಿಗಳೆಂದು ಹೇಳಿಕೊಳ್ಳುತ್ತಿದ್ದ ಜನಾಂಗೀಯ ವಾದಿಗಳಾದ ಕಿಬ್ತಿಗಳು ಅವರ ರಿಗಳಾಗಿದ್ದರು.

4. ಇಸ್ರಾಈಲರ ವೈರಿಗಳಾಗಿದ್ದ ಕಿಬ್ತಿಗಳು ಪ್ರಮುಖ ಅಧಿಕಾರ ಸ್ಥಾನಗಳನ್ನು ್ವಧೀನ ಪಡಿಸಿದ್ದರು.

5. ಇಸ್ರಾಈಲರು ಮಹಾ ಹೇಡಿಗಳಾಗಿದ್ದರು. ಪ್ರದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ತೆಸಬೇಕೆಂದು ಹೇಳಿದಾಗ ಅವರು ಹೆದರಿ ನಿರಾಕರಿಸಿದರು.

6. ಇಸ್ರಾಈಲರಲ್ಲಿ ಮೂಢನಂಬಿಕೆ ಮತ್ತು ಅನಾಚಾರಗಳು ಗಾಢವಾಗಿ ಬೇರೂರಿದ್ದವು. ನ್ನರಿಂದ ಅವರು ಮೂರ್ತಿ ಪೂಜಕರ ನಾಡಿನಿಂದ ಹಾದು ಹೋಗುವಾಗ ಪ್ರವಾದಿ ೂಸಾ(ಅ) ರೊಂದಿಗೆ ನಮಗೂ ಒಂದು ಮೂರ್ತಿ ಬೇಕೆಂದು ಒತ್ತಾಯಿಸಿದರು. ಆದ್ದರಿಂದಲೇ ಮಿರೀಗೆ ಅವರನ್ನು ಸುಲಭದಲ್ಲಿ ಗೋಪೂಜಕರಾಗಿ ಮಾಡಲು ಸಾಧ್ಯವಾಯಿತು.

7. ಅವರು ಸ್ವಾತಂತ್ರ್ಯದ ಬೆಲೆಯನ್ನು ಅರಿಯದವರು ಮತ್ತು ಲೌಕಿಕ ಸುಖ ೀಲುಪರಾಗಿದ್ದರು.

ಹೀಗೆ ಭಾರತೀಯ ಮುಸ್ಲಿಮರಿಗೆ ಪ್ರವಾದಿ ಮೂಸಾರ(ಅ) ಕಾಲದ ಇಸ್ರಾಈಲರೊಡನೆ ಲವು ಸಾಮ್ಯತೆಗಳಿದ್ದರೂ ಹಲವು ಭಿನ್ನತೆಗಳೂ ಇವೆ. ಅಂದು ಅಲ್ಲಿ ಸರ್ವಾಧಿಕಾರಿ ಂಕುಶಾಧಿಪತ್ಯವಿತ್ತು. ಭಾರತದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯಿದೆ. ಇಸ್ರಾಈಲರಿಗೆ ಜಿಪ್ಟ್‌ನಿಂದ ಪಾರಾಗಿ ಹೋಗಲು ವಿಶಾಲವಾದ ಪ್ರದೇಶಗಳಿದ್ದವು. ಭಾರತೀಯ ಮುಸ್ಲಿಮರು

ಭಾರತೀಯ ವಂಶಜರೇ ಆಗಿದ್ದಾರೆ. ಭಾರತವನ್ನು ತೊರೆಯುವುದನ್ನು ಅವರಿಗೆ ಯೋಚಿಸಲ ಸಾಧ್ಯವಿಲ್ಲ. ಹಾಗೆ ಹೋಗಬಹುದಾದಂತಹ ಬೇರೊಂದು ದೇಶವೂ ಇಲ್ಲ.

ಈಜಿಪ್ಟಿನಲ್ಲಿ ಮೂಸಾ(ಅ) ನಿರ್ವಹಿಸಿದ ಮತ್ತು ನಿರ್ವಹಿಸಲು ಆದೇಶಿಸಿದ್ದ ಮೂ ವಿಷಯಗಳು ಹೀಗಿವೆ:

1. ಮುಸ್ಲಿಮೇತರರಾದ ಕಿಬ್ತಿಗಳನ್ನು ಇಸ್ಲಾಮಿಗೆ ಆಮಂತ್ರಿಸುವುದು

''ಅವರ ಪ್ರಭು ಅವರನ್ನು 'ತುವಾ'ದ ಪವಿತ್ರ ಕಣಿವೆಯಲ್ಲಿ ಕರೆದಾಗ, ಫಿರ್‌ಔನ ಬಳಿಗೆ ಹೋಗಿರಿ. ಅವನು ವಿದ್ರೋಹಿಯಾಗಿ ಬಿಟ್ಟಿದ್ದಾನೆ. ಅವನೊಡನೆ ನೀ ಪರಿಶುದ್ಧನಾಗಲು ಸಿದ್ಧನಾಗಿರುವೆಯಾ? ಮತ್ತು ನಾನು ನಿನ್ನ ಪ್ರಭುವಿನ ಕಡೆಗೆ ನಿ ಮಾರ್ಗದರ್ಶನ ಮಾಡಿದರೆ (ಅವನ) ಭಯ ನಿಮ್ಮಲ್ಲಿ ಉಂಟಾದೀತೇ ಎಂದು ಕೇಳಿರಿ.

(ಪವಿತ್ರ ಕುರ್‌ಆನ್,79: 16-

''ನೀವಿಬ್ಬರೂ ಫಿರ್‌ಔನ್‌ನ ಬಳಿಗೆ ಹೋಗಿರಿ. ಅವನು ವಿದ್ರೋಹಿಯಾಗಿ ಬಿಟ್ಟಿದ್ದಾ ಅವನೊಡನೆ ನಯವಾಗಿ ಮಾತನಾಡಿರಿ. ಅವನು ಉಪದೇಶ ಸ್ವೀಕರಿಸಬಹುದು ಅಥವಾ ಭ ಪಡಬಹುದು.'' (ಪವಿತ್ರ ಕುರ್‌ಆನ್,20: 43,

ಇಲ್ಲಿ ಫಿರ್‌ಔನ್ ಮತ್ತು ಆತನ ಜನಾಂಗದಲ್ಲಿ ಸಂದೇಶ ಪ್ರಚಾರ ನಡೆಸಲಿಕ ಪ್ರವಾದಿ ಮೂಸಾರನ್ನು(ಅ) ನೇಮಿಸಲಾಗಿತ್ತು.

2. ಸ್ವ ಸಮುದಾಯದ ಸಂರಕ್ಷಣೆ

''ಮೂಸಾ ತನ್ನ ಜನಾಂಗದೊಡನೆ ಹೇಳಿದರು: ಅಲ್ಲಾಹನೊಡನೆ ಸಹಾಯ ಯಾಚಿ ಮತ್ತು ತಾಳ್ಮೆ ವಹಿಸಿರಿ. ಭೂಮಿ ಅಲ್ಲಾಹನದು. ಅವನು ತನ್ನ ದಾಸರಲ್ಲಿ ತನಗಿ ಬಂದವರನ್ನು ಅದರ ಉತ್ತರಾಧಿಕಾರಿಗಳಾಗಿ ಮಾಡುತ್ತಾನೆ. ಅಂತಿಮ ವಿಜಯವು ಅವನ ಭಯಪಟ್ಟು ವರ್ತಿಸುವವರಿಗಾಗಿದೆ.'' (ಪವಿತ್ರ ಕುರ್‌ಆನ್,7: 1

3. ಮರ್ದಿತ ಸ್ವಸಮುದಾಯದ ರಕ್ಷಣೆ

ಇಸ್ರಾಈಲರ ವಿಮೋಚನೆಯು ಪ್ರವಾದಿ ಮೂಸಾರ(ಅ) ನೇಮಕದ ಪ್ರಮು ಧ್ಯೇಯವಾಗಿತ್ತು.

''ಫಿರ್‌ಔನನು ಭೂಮಿಯಲ್ಲಿ ಬಂಡಾಯವೆದ್ದನು ಮತ್ತು ಅದರ ನಿವಾಸಿಗಳ ಪಂಗಡಗಳಾಗಿ ವಿಂಗಡಿಸಿಬಿಟ್ಟನು. ಆ ಪೈಕಿ ಒಂದು ಪಂಗಡವನ್ನು ಅವನು ಅವಮಾನಿಸುತ್ತಿದ್ದ ಅವರ ಗಂಡು ಮಕ್ಕಳನ್ನು ವಧಿಸುತ್ತಿದ್ದನು. ಮತ್ತು ಹೆಣ್ಣು ಮಕ್ಕಳನ್ನು ಬದುಕಿರ ಬಿಡುತ್ತಿದ್ದನು. ನಿಜಕ್ಕೂ ಅವನು ದಂಗೆಕೋರರಲ್ಲಾಗಿದ್ದನು. ನಾವು ಭೂಮಿಯ

ಳಿಯಲ್ಪಟ್ಟವರ ಮೇಲೆ ಕೃಪೆ ತೋರಬೇಕೆಂದೂ ಅವರನ್ನು ನಾಯಕರಾಗಿ ಮಾಡಿ ಸಬೇಕೆಂದೂ ಭೂಮಿಯಲ್ಲಿ ಅವರಿಗೆ ಪ್ರಭುತ್ವ ನೀಡಬೇಕೆಂದೂ ಫಿರ್‌ಔನ್, ಹಾಮಾನ್ ತ್ತು ಅವರ ಸೇನೆಗಳಿಗೆ ಯಾವುದರ ಭಯವಿತ್ತೋ ಅದನ್ನೇ ತೋರಿಸಿ ಕೊಡಬೇಕೆಂದೂ ಯಸಿದ್ದೆವು." (ಪವಿತ್ರ ಕುರ್‌ಆನ್,28: 4-6)

ಈ ವಿಮೋಚನೆಯು ಪ್ರವಾದಿ ಮೂಸಾರ(ಅ) ಮೂಲಕ ನಡೆಯಿತು. ಅಲ್ಲಾಹನು ವಾದಿ ಮೂಸಾ ಮತ್ತು ಹಾರೂನ್‌ರಿಗೆ(ಅ) ಆಜ್ಞಾಪಿಸಿದನು: "ನೀವು ಫಿರ್‌ಔನನ ಬಳಿಗೆ ಹೋಗಿರಿ ಮತ್ತು ನಾವು ನಿನ್ನ ಪ್ರಭುವಿನ ಕಡೆಯಿಂದ ಕಳುಹಿಸಲ್ಪಟ್ಟವರು. ಬನೀ ಇಸ್ರಾಈಲರನ್ನು ಮ್ಮ ಸಂಗಡ ಕಳುಹಿಸಿ ಬಿಡು. ಅವರಿಗೆ ಕಾಟ ಕೊಡಬೇಡ ಎಂದು ಹೇಳಿರಿ."

(ಪವಿತ್ರ ಕುರ್‌ಆನ್,20: 47)

ಮೂಸಾ ಹೇಳಿದರು: "ಓ ಫಿರ್‌ಔನ್! ನಾನು ಸರ್ವಲೋಕ ಪಾಲಕನ ಕಡೆಯಿಂದ ಳುಹಿಸಲ್ಪಟ್ಟಿದ್ದೇನೆ. ಅಲ್ಲಾಹನ ನಾಮವೆತ್ತಿ ಸತ್ಯದ ಹೊರತು ಇನ್ನೇನನ್ನೂ ಹೇಳದಿರಲಿಕ್ಕಾಗಿ ನ್ನನ್ನು ನಿಯೋಜಿಸಲಾಗಿದೆ. ನಾನು ನಿಮ್ಮ ಬಳಿಗೆ ನನ್ನ ಪ್ರಭುವಿನ ಕಡೆಯಿಂದ ನೇಮಕದ ವ್ಯಕ್ತ ಪ್ರಮಾಣದೊಂದಿಗೆ ಬಂದಿರುತ್ತೇನೆ. ಆದುದರಿಂದ ನೀನು ಬನೀ ಇಸ್ರಾಈಲರನ್ನು ನ್ನ ಸಂಗಡ ಕಳುಹಿಸಿ ಕೊಡು." (ಪವಿತ್ರ ಕುರ್‌ಆನ್,7: 104-105)

ಪ್ರವಾದಿ ಮೂಸಾ(ಅ) ಇಸ್ರಾಈಲರ ವಿಮೋಚಕರಾದರು. ಆ ಕುರಿತು ಅಲ್ಲಾಹ್ ಳಿದ್ದಾನೆ: "ಅವರ ಸ್ಥಾನದಲ್ಲಿ ದುರ್ಬಲರಾಗಿರಿಸಲ್ಪಟ್ಟಿದ್ದವರನ್ನು ನಾವು ಸಮೃದ್ಧಿಯನ್ನಿರಿಸಿದ್ದ ಭೂಭಾಗದ ಪೂರ್ವ ಪಶ್ಚಿಮಗಳ ವಾರೀಸುದಾರರನ್ನಾಗಿ ಮಾಡಿ ಬಿಟ್ಟೆವು. ಈ ರೀತಿಯಲ್ಲಿ ನೀ ಇಸ್ರಾಈಲರಿಗೆ ನೀಡಿದ್ದ ನಿನ್ನ ಪ್ರಭುವಿನ ಉತ್ತಮ ವಾಗ್ದಾನವು ನೆರವೇರಿತು. ಏಕೆಂದರೆ ವರು ತಾಳ್ಮೆ ವಹಿಸಿದ್ದರು. ಫಿರ್‌ಔನ್ ಮತ್ತು ಅವನ ಜನಾಂಗದವರು ರಚಿಸಿದ್ದೆಲ್ಲವನ್ನೂ ವು ಧ್ವಂಸ ಮಾಡಿ ಬಿಟ್ಟೆವು." (ಪವಿತ್ರ ಕುರ್‌ಆನ್,7: 137)

ಮುಸ್ಲಿಮೇತರರಲ್ಲಿ ಇಸ್ಲಾಮಿನ ಪ್ರಚಾರ ಮತ್ತು ಮುಸ್ಲಿಮ್ ಸಮುದಾಯದ ಧಾರಣೆಯಂತೆಯೇ ಮರ್ದಿತವಾದ ಸ್ವ ಸಮುದಾಯದ ಭದ್ರತೆ ಮತ್ತು ರಕ್ಷಣೆಗಾಗಿ ಸೆಸುವ ಚಟುವಟಿಕೆಗಳೂ ಇಕಾಮತುದ್ದೀನ್‌ನ ಭಾಗವೆಂದು ಇದರಿಂದ ಸ್ಪಷ್ಟವಾಗುತ್ತದೆ. ದ್ದರಿಂದಲೇ ಜಮಾಅತೆ ಇಸ್ಲಾಮೀ ಹಿಂದ್ ಈ ರಂಗದಲ್ಲಿಯೂ ಪ್ರಯತ್ನಿಸಬೇಕಾದ ಣೆಯನ್ನು ಹೊಂದಿದೆ.

ವಿಭಜನೆಯಿಂದ ಭಾರತೀಯ ಮುಸ್ಲಿಮರಿಗೆ ಭಾರೀ ಆಘಾತವಾಯಿತು. ಆ ಘಟನೆಯು ಹು ಸಂಖ್ಯಾತ ಸಮುದಾಯದಲ್ಲಿ ರಾಷ್ಟ್ರದ ಬಗ್ಗೆ ವಿಶೇಷ ಹಕ್ಕಿನ ಭಾವನೆಯನ್ನು ಬೆಳೆಸಿತು.

ಮುಸ್ಲಿಮರಲ್ಲಿ ಅಪಾಯಕಾರಿ ಕೀಳರಿಮೆ ನೆಲೆಸಿತು. ದೇವನ ಭೂಮಿಯು ದೇವನ ದಾಸರಿಗಾಗಿ ಅದರ ಮೇಲಿನ ಅವರ ಹಕ್ಕನ್ನು ಪ್ರಶ್ನಿಸುವ ಅಧಿಕಾರ ಯಾರಿಗೂ ಇಲ್ಲವೆಂಬ ಸತ ಪ್ರಜ್ಞೆಯ ಕೊರತೆಯು ಅದನ್ನು ಮತ್ತಷ್ಟು ಹೆಚ್ಚಿಸಿತು. ಈ ಪ್ರತಿಕೂಲ ಪರಿಸ್ಥಿತಿ ವಿರೋ ಶಕ್ತಿಗಳಿಗೆ ಮುಸ್ಲಿಮರ ಅಸ್ತಿತ್ವವನ್ನು ಪ್ರಶ್ನಿಸಿ ಅವರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ನ ಪಡಿಸಿ, ಹಕ್ಕುಗಳನ್ನು ನಿಷೇಧಿಸಿ, ಆರಾಧನಾಲಯಗಳನ್ನು ಧ್ವಂಸಗೊಳಿಸುವ ಅವಕ ನೀಡಿತು. ಸ್ವತಂತ್ರ ಭಾರತದಲ್ಲಿ ಸುಮಾರು ಮೂವತ್ತು ಸಾವಿರ ಕೋಮು ಗಲಭೆಗ ನಡೆದವು. ಅವುಗಳಲ್ಲಿ ಹಲವು ಸಾವಿರ ಮುಸ್ಲಿಮರು ಕೊಲ್ಲಲ್ಪಟ್ಟರು. ಸಹಸ್ರ ಗಟ್ಟಲೆ ಮಕ್ಕ ಅನಾಥರಾದರು. ಹಲವು ಸಾವಿರ ಮಹಿಳೆಯರು ವಿಧವೆಯರಾದರು. ಕೋಟಿಗಟ್ಟಲೆ ಮೌಲ್ಯ ಸೊತ್ತುಗಳು ನಾಶವಾದವು. ಇಂದಿಗೂ ದೇಶದ ನಾನಾ ಕಡೆಗಳಲ್ಲಿ ಈ ಕ್ರೌರ್ಯ ನಿರಾತಂಕವಾಗಿ ನಡೆಯುತ್ತಿದೆ. ಅಪರಾಧಿಗಳು ಯಾವ ಭೀತಿಯೂ ಇಲ್ಲದೆ ತಿರುಗಾಡುತ್ತಿದ್ದಾ ಅದರೊಂದಿಗೆ ಮುಸ್ಲಿಮರ ಶಿಕ್ಷಣ ಸಂಸ್ಥೆ ಮತ್ತು ಆರಾಧನಾಲಯಗಳು ಪರಾಧೀನವಾಗುತ್ತಿ ಶರೀಅತ್‌ನ ಅಂಗವಾಗಿ ಉಳಿದಿರುವ ವ್ಯಕ್ತಿ ನಿಯಮಗಳು ಬೆದರಿಕೆಗೆ ಗುರಿಯಾಗಿವೆ. ಎಲ್ಲೆ ಏಕ ಸಿವಿಲ್ ಕೋಡ್‌ಗಾಗಿ ಬೊಬ್ಬಿರಿಯಲಾಗುತ್ತಿದೆ. ವಕ್ಫ್ ಸೊತ್ತುಗಳನ್ನು ಪರಾಧೀನಗೊಳಿಸ ಪ್ರಯತ್ನ ನಡೆಯುತ್ತಿದೆ. ರಾಷ್ಟ್ರದ ಕೋಮು ಫ್ಯಾಸಿಸ್ಟ್ ಶಕ್ತಿಗಳು ಕ್ಷುಲ್ಲಕ ವಿಷಯಗಳಿಗ ಅವರನ್ನು ಮಾನಸಿಕ ಮತ್ತು ದೈಹಿಕವಾಗಿ ಹಿಂಸಿಸುತ್ತಿದ್ದಾರೆ.

ದೇಶದ ಈ ಅಪಾಯಕಾರಿ ಪರಿಸ್ಥಿತಿಯಲ್ಲಿ ತನ್ನ ಅಸ್ತಿತ್ವ ಮತ್ತು ಸಾಂಸ್ಕ ವ್ಯಕ್ತಿತ್ವದ ರಕ್ಷಣೆಗಾಗಿ ಮುಸ್ಲಿಮ್ ಸಮುದಾಯವನ್ನು ಸಜ್ಜುಗೊಳಿಸಬೇಕಾದು ಅನಿವಾರ್ಯವೆಂದು ಜಮಾಅತೆ ಇಸ್ಲಾಮಿ ತಿಳಿದಿದೆ. ಅದಕ್ಕೆ ಅವಶ್ಯಕವಾದ ಕಾರ್ಯಕ್ರಮಗಳ ರೂಪಿಸಿ ನಡೆಸುತ್ತಿದೆ.

ಸಮುದಾಯದ ಅಸ್ತಿತ್ವ ಮತ್ತು ವ್ಯಕ್ತಿತ್ವದ ರಕ್ಷಣೆಗಾಗಿ ಭಾರತದ ಎಲ್ಲ ಮುಸ್ಲಿಮರ ಸಮಾನ ವೇದಿಕೆಯಲ್ಲಿ ಒಂದು ಗೂಡಿಸಲು ಜಮಾಅತ್ ಪ್ರಯತ್ನಿಸುತ್ತಿದೆ. ಅಖಿಲ ಭಾ ಮುಸ್ಲಿಮ್ ಮಜ್ಲಿಸೆ ಮುಶಾವರತ್, ಮುಸ್ಲಿಮ್ ಪರ್ಸನಲ್ ಲಾ ಬೋರ್ಡ್, ಬಾ ಮಸೀದಿ ಸಮನ್ವಯ ಸಮಿತಿ ಇತ್ಯಾದಿಗಳ ರಚನೆ ಮತ್ತು ಚಟುವಟಿಕೆಗಳಲ್ಲಿ ಜಮಾಅ ನಿರ್ಣಾಯಕ ಪಾತ್ರ ವಹಿಸಿದೆ.

ಅದು ಈ ಎಲ್ಲ ವೇದಿಕೆಗಳಲ್ಲಿ ಈಗಲೂ ಸಕ್ರಿಯ ಪಾತ್ರ ವಹಿಸುತ್ತಿದೆ. ಹಾಗೆಯ ಧಾರ್ಮಿಕ ಅಲ್ಪ ಸಂಖ್ಯಾತರ ಉಳಿವಿಗೆ ತೀವ್ರ ಬೆದರಿಕೆಯೊಡ್ಡುತ್ತಿರುವ ಕೋಮು ಫ್ಯಾಸಿಸ ಶಕ್ತಿಗಳ ವಿರುದ್ಧ ಜನ ಜಾಗೃತಿ ಮೂಡಿಸಿ ಎಲ್ಲ ಜಾತ್ಯತೀತ ವಿಭಾಗಗಳಲ್ಲಿ ಸಹವ ವೇರ್ಪಡಿಸಲು ಜಮಾಅತ್ ಪ್ರಯತ್ನಿಸುತ್ತಿದೆ. ಕೋಮು ಫ್ಯಾಸಿಸಮ್‌ನ ವಿರುದ್ಧ ಸಾಂಸ್ಕ ನಾಯಕರು ಮತ್ತು ಬುದ್ಧಿ ಜೀವಿಗಳನ್ನು ಒಂದುಗೂಡಿಸುವುದಕ್ಕಾಗಿ ಅವರ ಸಾರ್ವಜ

ೀದಿಕೆಯನ್ನು ಸ್ಥಾಪಿಸುವ ಕಾರ್ಯದಲ್ಲಿಯೂ ಜಮಾಅತೆ ಇಸ್ಲಾಮಿ ನಿರ್ಣಾಯಕ ಪಾತ್ರ ಹಿಸಿದೆ. ಎಲ್ಲಕ್ಕಿಂತ ಮಿಗಿಲಾಗಿ ಪ್ರತಿಗಾಮಿ ಶಕ್ತಿಗಳ ಕುತಂತ್ರಗಳ ಬಗ್ಗೆ ಸಮುದಾಯದಲ್ಲಿ ಳುವಳಿಕೆ ಮೂಡಿಸಿ ಅವುಗಳನ್ನು ಪ್ರತಿರೋಧಿಸಲಿಕ್ಕಾಗಿ ಸಮುದಾಯದಲ್ಲಿ ವಿಶ್ವಾಸ ಪ್ರಜ್ಞೆ, ಕ್ಯ ಮನೋಭಾವ, ಸ್ವಾಭಿಮಾನ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಬೆಳೆಸಲು ಜಮಾಅತೆ ಸ್ಲಾಮಿಯು ವಿವಿಧ ಕಾರ್ಯಕ್ರಮಗಳನ್ನು ರಚಿಸಿ ನಡೆಸುತ್ತಿದೆ.

ಸಮುದಾಯದ ನ್ಯಾಯೋಚಿತ ಹಕ್ಕುಗಳನ್ನು ಗಳಿಸಿ ಕೊಡಲು ಸಾಂಸ್ಕೃತಿಕ ಅಸ್ತಿತ್ವ ುತ್ತು ವ್ಯಕ್ತಿತ್ವವನ್ನು ಸಂರಕ್ಷಿಸಲಿಕ್ಕಾಗಿ ಪ್ರಯತ್ನಿಸುತ್ತಿರುವ ಸಾಮುದಾಯಿಕ ಸಂಘಟನೆಗಳೊಂದಿಗೆ ಮಾಅತೆ ಇಸ್ಲಾಮಿಯು ಸಹಕಾರ ಮತ್ತು ರಚನಾತ್ಮಕ ಧೋರಣೆಯನ್ನು ಹೊಂದಿದೆ. ವುಗಳನ್ನು ಜಮಾಅತೆ ಇಸ್ಲಾಮಿಯು ಸಹೋದರ ಮತ್ತು ಸಹಾಯಕ ಸಂಘಟನೆಗಳೆಂದು ರಿಗಣಿಸುತ್ತದೆ. ಅವುಗಳ ಲೋಪ ದೋಷಗಳನ್ನು ಕೇವಲ ಹಿತಾಕಾಂಕ್ಷೆಯಿಂದ ಎತ್ತಿ ೋರಿಸುತ್ತದೆ. ಅಂತಹ ಪ್ರಯತ್ನಗಳನ್ನು ಹಲವೊಮ್ಮೆ ತಪ್ಪು ತಿಳಿಯಲಾಗುತ್ತಿರುವುದು ಷಾದನೀಯ.

ಸಮುದಾಯದ ಭದ್ರತೆಗಾಗಿ ನಿರ್ವಹಿಸುವ ವ್ಯಾವಹಾರಿಕ ಮತ್ತು ಉಪಯುಕ್ತವಾದ ಲ್ಲಾ ಚಟುವಟಿಕೆಗಳೂ ಜಮಾಅತೆ ಇಸ್ಲಾಮಿಯು ಇಕಾಮತುದ್ದೀನ್‌ಗಾಗಿ ವಹಿಸಿಕೊಂಡ ರ್ತವ್ಯಗಳ ಈಡೇರಿಕೆಗೆ ಸಹಾಯಕವಾಗಿವೆ. ಅವುಗಳನ್ನು ಜಮಾಅತೆ ಇಸ್ಲಾಮಿಯು ಅದರ ್ಯೇಯ ಸಾಧನೆಗೆ ಪೂರಕವಾದ ಚಟುವಟಿಕೆಗಳೆಂದು ಪರಿಗಣಿಸಿ ಅವುಗಳೊಂದಿಗೆ ಗರಿಷ್ಠ ಹಕರಿಸಲು ಪ್ರಯತ್ನಿಸುತ್ತಿವೆ. ಸಂಘಟನಾ ಭಿನ್ನತೆಗಳ ಹೊರತಾಗಿ ಸಮುದಾಯದ ಸಾಮಾನ್ಯ ಮಸ್ಯೆಗಳ ಬಗ್ಗೆ ಇನ್ನಷ್ಟು ಉತ್ತಮವಾದ ಐಕ್ಯಮತ್ಯವಿರಬೇಕೆಂದು ಅದು ಪ್ರಾಮಾಣಿಕವಾಗಿ ಯಸುತ್ತದೆ.



# XII

# ರಾಷ್ಟ್ರೀಯ ಸಾಮಾಜಿಕ ಸಮಸ್ಯೆಗಳು ಮತ್ತು ಜಮಾಅತೆ ಇಸ್ಲಾಮಿ

ನಮ್ಮ ದೇಶದಲ್ಲಿ ಬಹುಮಂದಿ ಧರ್ಮ ರಹಿತರಾಗಿದ್ದಾರೆ. ಅವರು ದೇವನನ ನಿರಾಕರಿಸುವವರು ಅಥವಾ ಆ ಬಗ್ಗೆ ಸಂಶಯ ಗ್ರಸ್ಥರಾಗಿದ್ದಾರೆ. ಅವರಿಗೆ ಧರ್ಮ ಅಥವ ದೇವನ ಬಗ್ಗೆ ಆಸಕ್ತಿ ಇಲ್ಲ. ಕಮ್ಯುನಿಝಮ್ ಮತ್ತು ಸೆಕ್ಯುಲರಿಝಮ್ ಮುಂತಾದ ಲೌಕಿ ವಿಚಾರಧಾರೆಗಳ ಪ್ರಚಾರ ಮತ್ತು ಚಟುವಟಿಕೆಯು ಧರ್ಮರಾಹಿತ್ಯವನ್ನು ಹೆಚ್ಚಿಸುತ್ತಿ ಇಂತಹ ಪ್ರಕ್ರಿಯೆಗಳು ಪ್ರವಾದಿಯವರ(ಸ) ಕಾಲದಲ್ಲಿ ಅತ್ಯಲ್ಪ ಪ್ರಮಾಣದಲ್ಲಿತ್ತು. ಅಂದ ನಾಸ್ತಿಕ-ಧರ್ಮರಹಿತ ಆಂದೋಲನಗಳು ಇಂದಿನಂತೆ ಸಂಘಟಿತ ಮತ್ತು ಯೋಜಿತವಾ ನಡೆಯುತ್ತಿರಲಿಲ್ಲ. ಆದ್ದರಿಂದ ಈ ರಂಗದಲ್ಲಿ ಇಸ್ಲಾಮಿ ಕಾರ್ಯಕರ್ತರು ಹೊಸ ಸಮಸ ಮತ್ತು ಪರಿಸ್ಥಿತಿಗಳನ್ನು ಎದುರಿಸುತ್ತಿದ್ದಾರೆ. ಧರ್ಮರಹಿತ ಧೋರಣೆಯನ್ನು ಜಮಾಅ ಇಸ್ಲಾಮಿ ಕಡೆಗಣಿಸುವಂತಿಲ್ಲ. ಆದ್ದರಿಂದ ಅದು ನಾಸ್ತಿಕ-ಧರ್ಮ ರಹಿತ ವಿಚಾರಧಾರೆಗಳನ ಧರ್ಮ ನಿರಪೇಕ್ಷ ಜೀವನ ವಿಧಾನ ಮತ್ತು ಧೋರಣೆಗಳನ್ನು ಸಮರ್ಥವಾಗಿ ಮತ ಸಕ್ರಿಯವಾಗಿ ವಿರೋಧಿಸುತ್ತದೆ. ಲೌಕಿಕ ವಿಚಾರಧಾರೆ ಮತ್ತು ಅವುಗಳ ಬುನಾದಿಯಲ್ಲಿರು ಜೀವನ ಕ್ರಮಗಳ ವಿರುದ್ಧ ವೈಚಾರಿಕ ಹೋರಾಟ ಮತ್ತು ಸಂಘಟಿತ ಚಟುವಟಿಕೆಗಳನ ನಡೆಸುತ್ತಿದೆ.

ಜಗತ್ತಿನ ಇತರ ಭಾಗಗಳಂತೆಯೇ ಭಾರತದಲ್ಲಿಯೂ ಇಂದು ಮೂಢನಂಬಿಕೆ ಮತ ಕಂದಾಚಾರಗಳು ಭಾರೀ ಪ್ರಚಾರ ಮತ್ತು ವ್ಯಾಪಕ ಪ್ರಭಾವ ಬೀರುತ್ತಿವೆ. ಬಾಹ್ಯವಾಗಿ ಇ ಧಾರ್ಮಿಕವೆಂದು ತೋರಿದರೂ ಲೌಕಿಕ ಹಿತಾಸಕ್ತಿಗಳೊಂದಿಗೆ ಬೆಸೆದುಕೊಂಡಿವೆ. ಎ ಮೂಢನಂಬಿಕೆ ಮತ್ತು ಅನಾಚಾರಗಳು ಐಹಿಕ ವಿಷಯಗಳೊಂದಿಗೆ ಸಂಬಂಧ ಹೊಂದಿ ಮೂರ್ತಿ ಪೂಜೆಯಿಂದ ತೊಡಗಿ ಮಹಾಪುರುಷರ ಹೆಸರಲ್ಲಿ ನಡೆಯುವ ಹರಕೆ ಉತ್ಸವಗಳ ಇದಕ್ಕೆ ಸಾಕ್ಷಿಯಾಗಿವೆ. ಮರಣೋತ್ತರ ಜೀವನದ ಸುರಕ್ಷತೆಗಾಗಿ ಯಾರೂ ಮಾನ ದೇವಮಂದಿರ ಬಳಿಗೆ ಹೋಗುವುದಿಲ್ಲ. ಆದ್ದರಿಂದ ಇಲ್ಲಿ ಆಧ್ಯಾತ್ಮಿಕತೆಯೂ ಲೌಕಿಕಗೊಳಿಸಲ್ಪಟ್ಟಿ ಧರ್ಮವು ವ್ಯಾಪಾರದ ಸರಕಾಗಿ ಮಾರ್ಪಟ್ಟಿದೆ. ಅದೇ ವೇಳೆ ವೈಯಕ್ತಿಕ ಜೀವನದ ಧರ್ಮವನ್ನು ಅಂಗೀಕರಿಸುವ ಬಹುತೇಕ ಮಂದಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀ ರಂಗಗಳಲ್ಲಿ ಅದನ್ನು ನಿರಾಕರಿಸುವವರಾಗಿದ್ದಾರೆ. ಹೆಚ್ಚಿನವರು ಅದರ ಅವಶ್ಯಕತೆ ಮತ

ಮಹತ್ವವನ್ನು ಅಂಗೀಕರಿಸುವುದಿಲ್ಲ. ಅಂಗೀಕರಿಸುವವರೂ ಅದರ ವ್ಯಾವಹಾರಿಕತೆಯನ್ನು ನಂಬುವುದಿಲ್ಲ. ಈ ಅಪಾಯಕಾರಿ ಲೌಕಿಕ ವಿಚಾರಧಾರೆಯನ್ನು ನೈಜ ವಿಶ್ವಾಸ ಪ್ರಚಾರದಿಂದ ಪ್ರತಿರೋಧಿಸಲು ಜಮಾಅತ್ ಪ್ರಯತ್ನಿಸುತ್ತಿದೆ.

ಧರ್ಮರಾಹಿತ್ಯವು ಜಾತಿ ಮತ ಭೇದವಿಲ್ಲದೆ ಎಲ್ಲ ಭಾರತೀಯರಿಗೂ ಸೋಂಕಿದ ಮಹಾ ವ್ಯಾಧಿಯಾಗಿದೆ. ಆರ್ಥಿಕ ರಂಗದಲ್ಲಿ ಅನೈತಿಕತೆ ತಾಂಡವವಾಡುತ್ತಿದೆ. ಭ್ರಷ್ಟಾಚಾರ, ವಂಚನೆ, ಶೋಷಣೆ, ಕಾಳಸಂತೆ, ಅಕ್ರಮ ದಾಸ್ತಾನು, ಕಳ್ಳ ನೋಟು, ಕಲಬೆರಕೆ ಇತ್ಯಾದಿ ಎಲ್ಲ ಆರ್ಥಿಕ ಅಪರಾಧಗಳೂ ಇಲ್ಲಿ ಮೆರೆಯುತ್ತಿದೆ. ಆದ್ದರಿಂದ ಪ್ರವಾದಿಗಳ ಹಾದಿಯನ್ನು ಅನುಗಮಿಸುತ್ತಿರುವ ಇಸ್ಲಾಮಿ ಆಂದೋಲನವು ಇಂತಹ ಕೆಡುಕುಗಳ ಬಗ್ಗೆ ಜನರಿಗೆ ತಿಳುವಳಿಕೆ ನೀಡಿ, ಅವುಗಳಿಂದ ವಿಮೋಚನೆ ಗೊಳಿಸಲು ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನೂ ನಡೆಸುತ್ತಿದೆ. ವ್ಯಕ್ತಿ, ಸಮಾಜ ಮತ್ತು ಸರಕಾರಗಳು ನಡೆಸುವ ದುರ್ವ್ಯಯ, ದಂದುವೆಚ್ಚಗಳ ಬಗ್ಗೆ ಜನರ ಗಮನ ಸೆಳೆದು ಅವುಗಳ ವಿರುದ್ಧ ಪ್ರಚಾರ ನಡೆಸುತ್ತಿದೆ.

ಕಲ್ಕತ್ತಾ, ಮುಂಬೈ ಮುಂತಾದ ಭಾರತದ ಪ್ರಮುಖ ನಗರಗಳ ಕೆಲವು ಬೀದಿಗಳಲ್ಲಿಯೂ, ಪಂಚತಾರಾ ಹೊಟೇಲುಗಳಲ್ಲಿಯೂ ವ್ಯಭಿಚಾರ ವ್ಯಾಪಕವಾಗಿದೆ. ಮಹಿಳೆಯರನ್ನು ಕೊಚ್ಚಿ ಹಾಕಲಾಗುತ್ತಿದೆ. ಇವೆಲ್ಲವೂ ಸರಕಾರದ ಅನುಮತಿಯಿಂದಲೇ ನಡೆಯುತ್ತಿವೆ. ಅಶ್ಲೀಲ ಸಿನೆಮಾ ಮತ್ತು ಅಸಭ್ಯ ನಾಟಕಗಳು ವಿಜೃಂಭಿಸುತ್ತಿವೆ. ಕೀಳಭಿರುಚಿಗಳನ್ನು ಪ್ರಚೋದಿಸುವ ಪತ್ರಿಕೆ, ನಿಯತಕಾಲಿಕ ಮತ್ತು ಪುಸ್ತಕಗಳು ಧಾರಾಳವಾಗಿ ಪ್ರಚಾರವಾಗುತ್ತಿವೆ. ಜಾಹೀರಾತು ಜನ ಜೀವನವನ್ನೂ ಅಶ್ಲೀಲತೆಯು ಜಾಹೀರಾತನ್ನೂ ಆವರಿಸಿಕೊಂಡಿದೆ. ಹೀಗೆ ಭಾರತದಾದ್ಯಂತ ಅನೈತಿಕತೆ ಮತ್ತು ಅನಾಚಾರ ತುಂಬಿ ತುಳುಕುತ್ತಿದೆ. ಜಮಾಅತೆ ಇಸ್ಲಾಮಿಯು ಇಂತಹ ಕೆಡುಕುಗಳಿಂದ ಸಮಾಜವನ್ನು ವಿಮೋಚನೆಗೊಳಿಸಲು ಒಂಟಿಯಾಗಿಯೂ ಇತರರ ಸಹಕಾರದೊಂದಿಗೆ ಸಾಮೂಹಿಕವಾಗಿಯೂ ಪ್ರಯತ್ನಿಸುತ್ತಿದೆ.

ಮದ್ಯ ಮತ್ತು ಮಾದಕ ದ್ರವ್ಯಗಳು ಭಾರತೀಯ ಜನತೆಯನ್ನು ಸ್ವಾಧೀನ ಪಡಿಸಿದೆ. ಅಮಲು ಪದಾರ್ಥ ಸೇವನೆ ವಿಪರೀತವಾಗಿದೆ. ಯುವಕರು ಮತ್ತು ವಿದ್ಯಾರ್ಥಿಗಳು ಮಾತ್ರವಲ್ಲ, ಮಹಿಳೆಯರೂ ಅದರ ಚಟಕ್ಕೆ ಬಲಿಯಾಗುತ್ತಿದ್ದಾರೆ. ಸರಕಾರವು ಅದಕ್ಕೆ ಪ್ರೋತ್ಸಾಹ ನೀಡುವಂತಹ ನೀತಿಯನ್ನು ಕೈಗೊಂಡಿದೆ. ಈ ಹಿನ್ನೆಲೆಯಲ್ಲಿ ಮದ್ಯ ಮತ್ತು ಮಾದಕ ದ್ರವ್ಯಗಳ ವಿರುದ್ಧ ವ್ಯಾಪಕ ಜನ ಜಾಗೃತಿ ಮೂಡಿಸುವ ಪ್ರಯತ್ನವನ್ನು ಇಸ್ಲಾಮಿ ಆಂದೋಲನವು ಅದರ ಕರ್ತವ್ಯವೆಂದು ಭಾವಿಸಿದೆ. ಜಮಾಅತೆ ಇಸ್ಲಾಮಿಯು ಸಮಾನ ಮನಸ್ಕರ ಸಹಕಾರದಿಂದ ಅದಕ್ಕಾಗಿ ಸಾಧ್ಯವಿದ್ದಷ್ಟು ಪ್ರಯತ್ನಿಸುತ್ತಿದೆ.

ಮಹಿಳೆಯರು ಇಂದು ಸಾರ್ವತ್ರಿಕವಾಗಿ ಹಿಂಸೆ ಸಂಕಷ್ಟಗಳಿಗೆ ಗುರಿಯಾಗುತ್ತಿದ್ದಾರೆ. ಅವರನ್ನು ನಿರ್ದಯವಾಗಿ ವಧಿಸಲಾಗುತ್ತಿದೆ. ಕಠೋರವಾಗಿ ಪೀಡಿಸಲಾಗುತ್ತಿದೆ. ಗರ್ಭ

ಪರೀಕ್ಷೆ ನಡೆಸಿ ಶಿಶು ಹೆಣ್ಣೆಂದು ತಿಳಿದರೆ ನಿಷ್ಕರುಣೆಯಿಂದ ಹೊಸಕಿ ಬಿಡಲಾಗುತ್ತದ ವರದಕ್ಷಿಣೆಯನ್ನು ಕಾನೂನು ಮೂಲಕ ನಿಷೇಧಿಸಿದ್ದರೂ ಅದು ಈಗಲೂ ಸಾರ್ವತ್ರಿಕವಾಗಿದ ಅದಕ್ಕಾಗಿ ಸ್ತ್ರೀಯರನ್ನು ಹಿಂಸಿಸಲಾಗುತ್ತಿದೆ. ಸತಿ, ದೇವದಾಸಿ ಪದ್ಧತಿ, ವ್ಯಕ್ತಿ ನಿಯಮಗ ದುರುಪಯೋಗದಿಂದ ಅವರನ್ನು ನಿತ್ಯ ದುರಂತಕ್ಕೆ ದೂಡಲಾಗುತ್ತಿದೆ. ಆದ್ದರಿಂದ ಇಂದ ಮಹಿಳೆಯು ಸಾಮಾನ್ಯವಾಗಿ ಗುಲಾಮ ಮತ್ತು ಪತಿತೆಯಾಗಿದ್ದಾಳೆ. ಘೋರ ಶೋಷಣೆಯ ಬಲಿಪಶುವಾಗಿದ್ದಾಳೆ. ಆತ್ಮ ಸಾಕ್ಷಿ ಎಚ್ಚರವಿರುವ ಮಾನವ ಪ್ರೇಮಿಗಳನ್ನು ತಲ್ಲಣಗೊಳಿಸುತ್ತಿರು ಇಂತಹ ಅನಾಗರಿಕ ಸಂಪ್ರದಾಯ ಮತ್ತು ಪರಿಸ್ಥಿತಿಯ ವಿರುದ್ಧ ಹೋರಾಡದಿರಲ ಮಾನವೀಯ ದೃಷ್ಟಿಯಿಂದ ಜಮಾಅತ್‌ಗೆ ಸಾಧ್ಯವಿಲ್ಲ.

ಸಾಮಾಜಿಕ ಅಸಮಾನತೆ, ಜಾತಿ ಸ್ಪರ್ಧೆ, ಭಾಷಾಂಧತೆ, ಸಂಕುಚಿತ ರಾಷ್ಟ್ರೀಯತೆಯಂತಹ ಹಲವು ಮಹಾ ವಿಪತ್ತುಗಳು ರಾಷ್ಟ್ರದಾದ್ಯಂತ ವ್ಯಾಪಿಸಿವೆ. ಇಸ್ಲಾಮಿ ಮೌಲ್ಯಗಳಿ ಸರಿಹೊಂದದ ಇಂತಹ ದುರ್ಭಾವನೆಗಳನ್ನು ಸತ್ಯ ಪ್ರಚಾರದಿಂದ ಜಮಾಅತೆ ಇಸ್ಲಾಮಿಯ ಎದುರಿಸುತ್ತದೆ.

ಇಂದು ಆಡಳಿತ ಮತ್ತು ರಾಜಕೀಯವು ಅಪರಾಧಿಗಳ ಕೈ ಸೇರಿದ ಸೆರೆಮನೆಯಲ್ಲಿರಬೇಕಾದವರು ರಾಷ್ಟ್ರದ ಮೇಲ್ವಿಚಾರಕರಾಗಿದ್ದಾರೆ. ಆದ್ದರಿಂದ ನಮ್ಮ ದೇಶ ಅಕ್ರಮ ಅನ್ಯಾಯಗಳಿಂದ ಯಾತನೆ ಅನುಭವಿಸುತ್ತಿದೆ. ಅನೈತಿಕತೆ, ಅಶ್ಲೀಲತೆಗಳಿಂ ನಾರುತ್ತಿದೆ. ಎಲ್ಲೆಡೆ ಕ್ರೌರ್ಯ, ಮೋಸ, ವಂಚನೆಯ ಕಥೆಗಳು ಕೇಳಿಸುತ್ತಿವೆ. ದೇ ರಕ್ಷಿಸಬೇಕಾದವರು ಕೋಟಿಗಟ್ಟಲೆ ಭಕ್ಷಿಸುತ್ತಾರೆ. ಕಾನೂನು ಪಾಲಕರು ಕಳ್ಳರಿಗು ದರೋಡೆಗೋರರಿಗೂ ಬೆಂಬಲ ನೀಡುತ್ತಾರೆ. ರಾಜಕಾರಣಿಗಳು ಹಸ್ತಕರ ಸನ್ನೆಯಂ ಚಲಿಸುತ್ತಾರೆ. ದರೋಡೆಗಿಂತ ಹೆಚ್ಚು ಲಾಭದಾಯಕವಾಗಿರುವುದರಿಂದ ಅಪರಾಧಿಗಳು ರಾಜಕೀಯ ಸೇರುತ್ತಿದ್ದಾರೆ. ಈ ತೀವ್ರ ಬಿಕ್ಕಟ್ಟಿನಿಂದ ರಕ್ಷಿಸಬೇಕೆಂಬ ಪ್ರಾಮಾಣಿಕ ಕಳಕಳಿಯಿಂ ಜಮಾಅತೆ ಇಸ್ಲಾಮಿಯು ರಾಜಕೀಯದ ಅಪರಾಧೀಕರಣ ಮತ್ತು ಹಣದ ಪ್ರಭಾವವನ ತಡೆಯಲು ತನ್ನ ಸೀಮಿತ ಸಾಧನಾನುಕೂಲತೆಗಳಿಂದ ಶ್ರಮಿಸುತ್ತಿದೆ. ಹಾಗೆಯೇ ಕೋಮುವಾ ಮತ್ತು ಜಾತೀಯತೆಯ ಹಿಡಿತದಿಂದ ರಾಜಕೀಯ ಮತ್ತು ಆಡಳಿತದ ವಿಮೋಚನೆಯ ಯತ್ನದಲ್ಲಿ ಆದಷ್ಟು ಭಾಗಿಯಾಗುತ್ತಿದೆ. ಅದಕ್ಕಾಗಿ ಚುನಾವಣಾ ರಾಜಕೀಯವನ್ನು ಬಳಸುತ್ತಿದ ಜನರು ಮತ್ತು ಸರಕಾರದ ಕಡೆಯಿಂದಾಗುವ ಉಗ್ರವಾದ ಮತ್ತು ಭಯೋತ್ಪಾದಕತೆಯನ ಇತರರ ಸಹಕಾರದಿಂದ ಜಮಾಅತ್ ವಿರೋಧಿಸುತ್ತದೆ. ಟಾಡಾದಂತಹ ಕರಾಳ ನಿಯಮಗ ವಿರುದ್ಧ ಧ್ವನಿಯೆಬ್ಬಿಸುತ್ತಿದೆ.

ನಮ್ಮ ಲೋಕವು ಏಕಧ್ರುವವಾಗಿದೆ. ಬಂಡವಾಳಶಾಹೀ ಶಕ್ತಿಗಳು ಇಂದಿನ ಜಗತ್ತನ ನಿಯಂತ್ರಿಸಿ ಮುನ್ನಡೆಸುತ್ತಿದೆ. ಹಿಂದುಳಿದ ಮತ್ತು ಅಭಿವೃದ್ಧಿ ಶೀಲ ರಾಷ್ಟ್ರಗಳು ಆರ್ಥಿಕ

ಂಸ್ಕೃತಿಕ ಮತ್ತು ರಾಜಕೀಯವಾಗಿ ಸಾಮ್ರಾಜ್ಯ ಶಾಹಿತ್ವದ ಅಧೀನವಾಗುತ್ತಿವೆ. ಜಾಗತಿಕ ನಸಂಖ್ಯೆ 30%ಕ್ಕಿಂತ ಕಡಿಮೆಯಿರುವ ಮುಂದುವರಿದ ಜನತೆಯು ಉಳಿದ ಜನಾಂಗ ಮತ್ತು ಷ್ಟ್ರಗಳನ್ನು ಗ್ಯಾಟ್, ಜಾಗತಿಕ ಬ್ಯಾಂಕ್ ಮತ್ತು ಅಂತರಾಷ್ಟ್ರೀಯ ಹಣಕಾಸು ನಿಧಿಯ ೂಲಕ ಆರ್ಥಿಕವಾಗಿ ಶೋಷಿಸುತ್ತಿವೆ. ತಮ್ಮ ಸಾಂಸ್ಕೃತಿಕ ದುರಾಚಾರಗಳನ್ನು ವಾರ್ತಾ ಾಧ್ಯಮಗಳ ಮೂಲಕ ಹಿಂದುಳಿದ ಸಮಾಜಗಳ ಮೇಲೆ ಹೇರುತ್ತಿವೆ. ಭಂಡವಾಳಶಾಹಿ ರೋಧಿ ತತ್ವ ಸಿದ್ಧಾಂತಗಳಿಗೆ ದೃಶ್ಯ-ಶ್ರವಣ ಮಾಧ್ಯಮಗಳ ಮೂಲಕ ಮಸಿ ಬಳಿಯುತ್ತಿವೆ. ನವ ವಸಾಹತು ಶಾಹಿಯ ಬಲಿ ಪಶುಗಳಲ್ಲಿ ಭಾರತವೂ ಸೇರಿದೆ. ಆದ್ದರಿಂದ, ನವ ಮ್ರಾಜ್ಯ ಶಾಹಿ ಶಕ್ತಿಗಳ ಕಪಟ ತಂತ್ರಗಳನ್ನೂ ಅವು ಸೃಷ್ಟಿಸುವ ಗಂಭೀರ ಸಾಮಾಜಿಕ, ರ್ಥಿಕ, ಸಾಂಸ್ಕೃತಿಕ, ಕೌಟುಂಬಿಕ ಸಮಸ್ಯೆಗಳ ಕುರಿತು ಜನರಿಗೆ ತಿಳುವಳಿಕೆ ನೀಡಲು ಮಾಅತ್ ಪ್ರಯತ್ನಿಸುತ್ತಿದೆ.

ನಮ್ಮ ದೇಶವೂ ಸೇರಿ ಎಲ್ಲಾ ಹಿಂದುಳಿದ ಅಭಿವೃದ್ಧಿ ಶೀಲ ರಾಷ್ಟ್ರಗಳು ಮುಂದುವರಿದ ರಾಷ್ಟ್ರಗಳ ಮಾರುಕಟ್ಟೆಯಾಗಿ ಬಿಟ್ಟಿವೆ. ಅವರು ಆಕರ್ಷಕ ಜಾಹೀರಾತುಗಳಿಂದ ನರನ್ನು ಮರುಳುಗೊಳಿಸಿ ಹೊಸ ಹೊಸ ಉತ್ಪನ್ನಗಳನ್ನು ಮಾರುತ್ತಿದ್ದಾರೆ. ಆದ್ದರಿಂದ ಾರತವು ಗ್ರಾಹಕ ಸಂಸ್ಕೃತಿಗೆ ಬಲಿಯಾಗುತ್ತಿದೆ. ಶ್ರೇಷ್ಠ ಮೌಲ್ಯಗಳು ಮಣ್ಣು ಮುಕ್ಕುತ್ತಿವೆ. ಲ್ಲರ ಗಮನ ಮತ್ತು ಶ್ರಮವು ಸಂಪನ್ಮೂಲ ಸಂಗ್ರಹ ಮತ್ತು ಹಣ ಸಂಪಾದನೆಯಲ್ಲೇ ೇಂದ್ರೀಕೃತವಾಗಿದೆ. ಆದ್ದರಿಂದ ಲೋಕದಲ್ಲಿ ವ್ಯಾಪಾರ ಸಂಸ್ಕೃತಿ ಪ್ರಬಲಗೊಂಡಿದೆ. ಇಲ್ಲಿ ಲ್ಲವೂ ವ್ಯಾಪಾರೀಕರಣಗೊಂಡಿದೆ. ಎಲ್ಲಾ ವಿಷಯಗಳ ನಿರ್ಧಾರ ಮತ್ತು ಜಾರಿಯು ಕೂಡಿಸು-ೆ, ನಷ್ಟ-ಉಳಿತಾಯಗಳ ಲೆಕ್ಕಾಚಾರಗಳಿಂದ ನಡೆಯುತ್ತಿದೆ. ಎಲ್ಲೆಡೆ ಅಂಕೆಗಳೇ ಆಧಿಪತ್ಯ ್ಥಾಪಿಸುತ್ತಿವೆ. ಮಾನವ ಸಂಬಂಧಗಳೂ ಅದರಿಂದ ಹೊರತಲ್ಲ. ಎಲ್ಲವನ್ನೂ ಲಾಭ ನಷ್ಟದ ್ರಷ್ಟಿಯಿಂದ ನೋಡಿ ನಿರ್ಣಯಿಸಲಾಗುತ್ತಿದೆ. ಇಂತಹ ಪತನಕ್ಕೆ ಸಮಾಜವನ್ನು ತಲುಪಿಸಿದ ಲೌಕಿಕ ಜೀವನ ದೃಷ್ಟಿಕೋನ ಮತ್ತು ಅದರ ಉತ್ಪನ್ನವಾಗಿರುವ ಗ್ರಾಹಕ ಸಂಸ್ಕೃತಿಯ ವಿರುದ್ಧ ಮಾಅತ್ ಧ್ವನಿಯೆತ್ತಿ ಜನ ಜಾಗೃತಿಯ ಪ್ರಯತ್ನವನ್ನು ನಡೆಸುತ್ತಿದೆ.

ಜನ ಜೀವನದ ತಪ್ಪು ಹೆಜ್ಜೆ, ನಿಸರ್ಗ ವಿರೋಧಿ ಮತ್ತು ಪ್ರತಿಗಾಮಿತನದ ್ರಗತಿಯಿಂದಾಗಿ ಹಲವಾರು ಪರಿಸರ ಸಮಸ್ಯೆಗಳು ಹುಟ್ಟಿಕೊಂಡಿವೆ. ಪ್ರಗತಿರಂಗದ ಪ್ರಚಲಿತ ್ತಿ ಮುಂದುವರಿದರೆ ಮುಂದಿನ ಶತಮಾನದಲ್ಲಿ ಭೂಮಿಯ ತಾಪಮಾನವು ಮೂರ್‍ನಾಲ್ಕು ಗ್ರಿ ಹೆಚ್ಚಬಹುದು. ಇದರಿಂದ ಮಾನವ ಜೀವನ ಮಾತ್ರವಲ್ಲ, ಜೀವ ಜಾಲ ಮತ್ತು ಸ್ಯ ಸಂಕುಲವೂ ನಾಶವಾದೀತು. ಇದು ದೂರದೃಷ್ಟಿಯಿಲ್ಲದ ಹಾಗೂ ಮುಂದಿನ ಪೀಳಿಗೆಯ ್ಥಿತಿಯ ಬಗ್ಗೆ ಆಲೋಚಿಸದ ಸಮಕಾಲೀನ ಸಮಾಜದ ಕೇವಲ ಶ್ರೀಮಂತರ ಸುಖ ಲಭ್ಯಗಳಿಗೆ ಪ್ರಾಮುಖ್ಯ ನೀಡುವ ಯಂತ್ರ ಸಂಸ್ಕೃತಿಯ ಅನಿವಾರ್ಯ ದುರಂತವಾಗಿದೆ. ೌಕಿಕ ನಾಗರಿಕತೆಯು ಬೆಳೆಸಿದ ಕುರುಡು ಭೋಗ ಲಾಲಸೆಯ ಸಹಜ ಪರಿಣಾಮವೂ ಆಗಿದೆ.

ದೇವನನ್ನು ಮರೆತ ಮಾನವನು ತನ್ನ ಸಾಧನೆಗಾಗಿ ಅಹಂಕಾರ ಪಟ್ಟನು. ನಿಸರ್ಗವನ ಅಧೀನ ಪಡಿಸಿರುವುದಾಗಿ ವಾದಿಸಿದನು. ವಸ್ತುತಃ ಅವನು ಅದನ್ನು ನಾಶಪಡಿಸುತ್ತಿದ್ದನ ಪ್ರಪಂಚ ವ್ಯವಸ್ಥೆಯನ್ನು ಕಾಪಾಡುವ ಸೂಕ್ಷ್ಮಾಂಶಗಳನ್ನು ಗುರುತಿಸಲಾಗದೆ ಮಾನವ ಅವುಗಳನ್ನು ಕೊರೆದು ತಿನ್ನುವ ಮಾಲಿನ್ಯಗಳ ರಾಶಿಯನ್ನು ನಿರ್ಮಿಸುತ್ತಿದ್ದನು. ಆದ್ದರಿಂ ನರ ವಂಶದ ಉಳಿವಿಗೆ ಮರು ಚಿಂತನೆ ಅನಿವಾರ್ಯವಾಗಿದೆ. ವಿಕಾಸ ಮತ್ತು ಪ್ರಗತಿಗಳ ನಿಸರ್ಗ ಮತ್ತು ಪರಿಸರಕ್ಕೆ ವಿಶೇಷ ಗಮನ ನೀಡಬೇಕು. ಭೋಗಾಸಕ್ತ ಸಮಾಜಕ್ಕೆ ಇ ಕಷ್ಟದ ಕೆಲಸವಲ್ಲ. ಆದ್ದರಿಂದ ಹೆಚ್ಚುತ್ತಿರುವ ಪರಿಸರ ಸಮಸ್ಯೆಗಳ ಕುರಿತು ಜನಜಾಗ್ರ ಮೂಡಿಸುವ ಯೋಜಿತ ಪ್ರಯತ್ನಗಳು ನಿರಂತರವಾಗಿ ನಡೆಯಬೇಕಾಗಿದೆ.

**"ಮಾನವ ಕರಗಳ ಚಟುವಟಿಕೆಗಳಿಂದಾಗಿ ನೆಲ ಜಲಗಳಲ್ಲಿ ಕ್ಷೋಭೆ ವ್ಯಾಪಿಸಿ ಅವರು ತಮ್ಮ ಕರ್ಮದ ಫಲವುಣ್ಣಲಿಕ್ಕಾಗಿ." (ಪವಿತ್ರ ಕುರ್‌ಆನ್, 30: 41)** ಎಂ ಕುರ್‌ಆನ್ ವಚನವನ್ನು ಜ್ಞಾಪಿಸಿ, ಇಸ್ಲಾಮಿ ಆಂದೋಲನವು ಸಮಾಜವು ಸೃಷ್ಟಿಸುವ ಪರಿಸ ಸಮಸ್ಯೆಗಳ ಬಗ್ಗೆ ಜನ ಜಾಗೃತಿ ಮೂಡಿಸಲು ಪ್ರಯತ್ನಿಸುತ್ತಿದೆ.

ಹೀಗೆ ರಾಷ್ಟ್ರ ಮತ್ತು ಜನತೆಯನ್ನು ಕಾಡುತ್ತಿರುವ ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ರಂಗಗಳಲ್ಲಿ ವ್ಯಾಪಕವಾಗಿರುವ ಮೌಲ್ಯ ಕುಸಿತ ಮತ್ತು ಅದರಿಂದಾಗುವ ಮಹಾ ದುರಂತಗ ಕುರಿತು ಜಮಾಅತೆ ಇಸ್ಲಾಮಿಯು ಸಮಾಜವನ್ನು ಜಾಗೃತಗೊಳಿಸಿ ಅವುಗಳಿಂದ ವಿಮೋಚ ನೀಡುವ ದೇವ ಹಾದಿಯನ್ನು ಪರಿಚಯ ಪಡಿಸುತ್ತಿದೆ. ಅದಕ್ಕೆ ಅವಶ್ಯಕವಾದ ಕ್ರಿಯ ಯೋಜನೆಗಳನ್ನು ಜಮಾಅತೆ ಇಸ್ಲಾಮಿಯು ಅದರ ಧೋರಣೆ ಮತ್ತು ಕಾರ್ಯಕ್ರಮದಲ್ಲಿ ಸೇರಿಸಿದೆ.



# XIII

# ಸಮುದಾಯ ಸಂರಕ್ಷಣೆ ಮತ್ತು ಸಶಸ್ತ್ರ ಚಟುವಟಿಕೆ

ಜಮಾಅತೆ ಇಸ್ಲಾಮಿಯು ಈ ತನಕ ಸಶಸ್ತ್ರ ಗಲಭೆ ಅಥವಾ ಬುಡಮೇಲು ಕೃತ್ಯದ ಮಾರ್ಗವನ್ನು ಅಂಗೀಕರಿಸಿಲ್ಲ. ಯಾವ ಕಾರಣಕ್ಕಾಗಿಯೂ ಆ ಮಾರ್ಗವನ್ನು ಅವಲಂಬಿಸಲಾರದು. ಇದರ ಸಂವಿಧಾನದಲ್ಲಿ ಹೀಗೆ ಹೇಳಲಾಗಿದೆ: ಸಂಘಟನೆಯು ತನ್ನ ಧ್ಯೇಯ ಸಾಧನೆಗಾಗಿ ರಚನಾತ್ಮಕ ಹಾಗೂ ಶಾಂತಿಯುತ ಮಾರ್ಗಗಳನ್ನು ಅನುಸರಿಸುವುದು. ಅರ್ಥಾತ್, ಸಂದೇಶ ಪ್ರಚಾರ ಮತ್ತು ಬೋಧನೆಗಳ ಮೂಲಕ ವಿಚಾರ ಮತ್ತು ಚಾರಿತ್ರ್ಯಗಳ ಸುಧಾರಣೆ ಮಾಡುವುದು. ತನ್ಮೂಲಕ ದೇಶದ ಸಾರ್ವಜನಿಕ ಜೀವನದಲ್ಲಿ ತಾನು ಬಯಸುವ ಸತ್ಕ್ರಾಂತಿಗಾಗಿ ಜನಾಭಿಪ್ರಾಯವನ್ನು ರೂಪಿಸುವುದು. (ಪರಿಚ್ಛೇದ 5ರಲ್ಲಿ 3)

## ಕಾರಣವೇನು?

1. ಜಮಾಅತೆ ಇಸ್ಲಾಮಿಯು ಪ್ರವಾದಿಗಳ ಹಾದಿ ಮತ್ತು ಪರಂಪರೆಯನ್ನು ಅನುಸರಿಸುತ್ತಿದೆ. ಪವಿತ್ರ ಕುರ್‌ಆನ್ ಪರಿಚಯ ಪಡಿಸಿದ, ಮುಸ್ಲಿಮೇತರರ ಮಧ್ಯೆ ಬಾಳಿದ್ದ ಎಲ್ಲ ಪ್ರವಾದಿಗಳೂ ಅವರಿಗೆ ಅಲ್ಲಾಹನ ಸನ್ಮಾರ್ಗವನ್ನು ಪರಿಚಯಿಸಿ ಅದರತ್ತ ಆಹ್ವಾನಿಸುವ ಮಹತ್ತರ ಕಾರ್ಯಭಾರವನ್ನು ನಿರ್ವಹಿಸಿದ್ದರು. ಈ ಸತ್ಯ ಪ್ರಚಾರವನ್ನು ನಿರ್ವಹಿಸುತ್ತಿದ್ದ ದೇವ ಪ್ರವಾದಿಗಳು ಮತ್ತು ಅವರ ಅನುಯಾಯಿಗಳು ಕ್ರೂರ ಹಿಂಸೆಗೆ ಗುರಿಯಾದರು. ಅವರ ನಿರ್ಮೂಲನಕ್ಕಾಗಿ ವೈರಿಗಳು ಸರ್ವ ಪ್ರಯತ್ನ ನಡೆಸಿದ್ದರು. ಆದರೂ ಪ್ರವಾದಿಗಳಾಗಲೀ ಅನುಯಾಯಿಗಳಾಗಲೀ ಸಶಸ್ತ್ರ ಪ್ರತೀಕಾರ ಅಥವಾ ಹಿಂಸಾ ಮಾರ್ಗವನ್ನು ಅವಲಂಬಿಸಲಿಲ್ಲ. ಎಲ್ಲವನ್ನೂ ಸಹಿಸಿ ತಾಳ್ಮೆಯಿಂದ ಸತ್ಯ ಪ್ರಚಾರವನ್ನು ಸತತ ಮುಂದುವರಿಸಿದರು. ತದ್ವಿರುದ್ಧವಾದ ಉದಾಹರಣೆ ಎಲ್ಲಿಯೂ ಕಾಣ ಸಿಗುವುದಿಲ್ಲ.

2. ಬಹುತೇಕ ಪ್ರವಾದಿಗಳು ದೇಶ ಮತ್ತು ಜನರ ಮೇಲೆ ಅಧಿಕಾರ ನಡೆಸುವ ಮುಂದಾಳುಗಳನ್ನು ಎದುರಿಸಬೇಕಾಯಿತು. ಕೃತಕವಾಗಿ ಸರ್ವಾಧಿಕಾರವನ್ನು ಸ್ವಾಧೀನ ಪಡಿಸಿದ್ದ ಗಣ್ಯರೇ ಪ್ರವಾದಿಗಳ ಪ್ರಮುಖ ವೈರಿಗಳಾಗಿದ್ದರು. ಪ್ರವಾದಿ ಇಬ್ರಾಹೀಮ್‌ರನ್ನು ನಮ್ರೂದ್ ಮತ್ತು ಪ್ರವಾದಿ ಮೂಸಾರನ್ನು ಫಿರ್‌ಔನ್ ವಿರೋಧಿಸಿದ್ದರು. ಸಮುದಾಯದ ಪ್ರಮುಖ ನೇತಾರರೇ (ಮಲಅ್) ನೂಹ್, ಹೂದ್, ಸಾಲಿಹ್, ಲೂತ್, ಶುಐಬ್(ಅ)ರಂತಹ

ಪ್ರವಾದಿಗಳನ್ನು ಉಗ್ರವಾಗಿ ವಿರೋಧಿಸಿದ್ದರು. ಆದರೂ ಪ್ರವಾದಿಗಳು ತಮ್ಮ ಸಂದೇ ಪ್ರಚಾರ ಕಾರ್ಯಕ್ಕಾಗಿ ಶಾಂತಿಯುತ ಮಾರ್ಗವನ್ನೇ ಅವಲಂಬಿಸಿದ್ದರು. ಅವರು ಸಶ ಸಂಘರ್ಷ ನಡೆಸಿರಲಿಲ್ಲ.

ಪ್ರವಾದಿ ನೂಹ್‌ರು(ಅ) ತಮ್ಮ ಚಟುವಟಿಕೆಯ ಬಗ್ಗೆ ಹೀಗೆ ವರದಿ ಸಲ್ಲಿಸಿದ್ದರ **"ನನ್ನ ಪ್ರಭು! ನಾನು ನನ್ನ ಜನಾಂಗದವರನ್ನು ಹಗಲಿರುಳೆನ್ನದೆ ಕರೆದೆನು. ಆದರೆ ನ ಕರೆಯು ಅವರ ಪಲಾಯನವನ್ನು ಮಾತ್ರ ಹೆಚ್ಚಿಸಿತು. ನೀನು ಅವರನ್ನು ಕ್ಷಮಿಸುವಂತಾಗಲೆಂ ನಾನು ಅವರನ್ನು ಕರೆದಾಗಲೆಲ್ಲಾ ಅವರು ಕಿವಿಗಳಲ್ಲಿ ಬೆರಳುಗಳನ್ನು ತುರುಕಿಸಿಕೊಂಡರ ತಮ್ಮ ವಸ್ತ್ರಗಳಿಂದ ಮುಖ ಮುಚ್ಚಿಕೊಂಡರು. ಹಠಮಾರಿತನ ತೋರಿದರು ಮತ್ತು ಭಾ ಅಹಂಭಾವ ತೋರಿಸಿದರು. ತರುವಾಯ ನಾನು ಅವರಿಗೆ ಬಹಿರಂಗವಾಗಿ ಕರೆ ಕೊಟ್ಟೆನ ಅನಂತರ ನಾನು ಘಂಟಾಘೋಷವಾಗಿ ಧರ್ಮಾಹ್ವಾನ ನೀಡಿದೆನು ಮತ್ತು ರಹಸ್ಯವಾಗಿಯ ತಿಳಿ ಹೇಳಿದೆನು."**

**(ಪವಿತ್ರ ಕುರ್‌ಆನ್,71: 5-**

ಪರಾಕ್ರಮಿಗಳಾದ ವೈರಿಗಳೊಡನೆ ಪ್ರವಾದಿಗಳು ಶಾಂತ ಮತ್ತು ಸೌಮ್ಯ ಭಾಷ ಶೈಲಿಯನ್ನು ಅವಲಂಬಿಸಿದ್ದರು. ಅವರಿಗೆ ಹಾಗೆಯೇ ಆದೇಶಿಸಲಾಗಿತ್ತು. ಫಿರ್‌ಔನ ಮಹಾಕ್ರೂರಿಯಾದ ಸರ್ವಾಧಿಕಾರಿ, ಮರ್ದಕ ಮತ್ತು ಅಹಂಕಾರಿಯಾಗಿದ್ದ. ಆದರು ಆತನೊಡನೆ ವ್ಯವಹರಿಸುವಾಗ ಬಹಳ ಸೌಮ್ಯ ಮತ್ತು ಸಭ್ಯ ಶೈಲಿಯನ್ನು ಅನುಸರಿಸುವಂ ಅಲ್ಲಾಹನು ಆಜ್ಞಾಪಿಸಿದ್ದನು. ಪ್ರವಾದಿ ಮೂಸಾ ಮತ್ತು ಸಹೋದರ ಹಾರೂನ್‌ರಿಗೆ ಹೀ ಅಲ್ಲಾಹನು ಆಜ್ಞಾಪಿಸುತ್ತಾನೆ -

"ನೀವು ಮತ್ತು ನಿಮ್ಮ ಸಹೋದರ ನನ್ನ ನಿದರ್ಶನಗಳ ಸಹಿತ ಹೋಗಿರಿ ಮತ್ತು ನೀವು ನನ್ನ ಸ್ಮರಣೆಯಲ್ಲಿ ಲೋಪ ಮಾಡಬೇಡಿರಿ. ನೀವಿಬ್ಬರೂ ಫಿರ್‌ಔನ್‌ನ ಬಳಿ ಹೋಗಿರಿ. ಅವನು ವಿದ್ರೋಹಿಯಾಗಿ ಬಿಟ್ಟಿದ್ದಾನೆ. ಅವನೊಡನೆ ನಯವಾಗಿ ಮಾತಾಡಿರಿ ಅವನು ಉಪದೇಶ ಸ್ವೀಕರಿಸಬಹುದು ಅಥವಾ ಭಯ ಪಡಬಹುದು."

(ಪವಿತ್ರ ಕುರ್‌ಆನ್,20: 42-44

3. ಪ್ರವಾದಿ ಮೂಸಾ(ಅ) ನಮ್ಮಂತೆಯೇ ಮರ್ದಿತ ಸಮಾಜದ ಸುಧಾರಣೆ ಮತ್ತು ಸಂರಕ್ಷಣೆ ಹಾಗೂ ಇಸ್ರಾಈಲರಿಗೆ ಇಸ್ಲಾಮಿನ ಸಂದೇಶವನ್ನು ತಲುಪಿಸಿದ, ಕುರ್‌ಆನ್ ಪರಿಚಯಗೊಳಿಸಿದ ಏಕೈಕ ಪ್ರವಾದಿಯಾಗಿದ್ದಾರಲ್ಲವೇ? ಅವರು ಸಹನೆ ಸಂಯಮದ ಧೋರಣೆ ಅವಲಂಬಿಸಿದ್ದರು. ಮರ್ದಿತ ಇಸ್ರಾಈಲ್ ಜನತೆಗೂ ಅವರು ಅದನ್ನೇ ಬೋಧಿಸಿದ್ದರು. ಮೂಸಾ ತಮ್ಮ ಜನಾಂಗದೊಡನೆ ಹೀಗೆಂದರು: "ಅಲ್ಲಾಹನೊಡನೆ ಸಹಾಯ ಯಾಚಿಸಿರಿ ಮತ್ತು ತಾಳ್ಮೆ ವಹಿಸಿರಿ. ಭೂಮಿ ಅಲ್ಲಾಹನದು. ಅವನು ತನ್ನ

ಸರಲ್ಲಿ ತನಗಿಷ್ಟ ಬಂದವರನ್ನು ಅದರ ಉತ್ತರಾಧಿಕಾರಿಗಳಾಗಿ ಮಾಡುತ್ತಾನೆ. ಅಂತಿಮ ಜಯವು ಅವನನ್ನು ಭಯಪಟ್ಟು ವರ್ತಿಸುವವರಿಗಾಗಿದೆ."

4. ಸಾಮಾನ್ಯವಾಗಿ ಪ್ರವಾದಿಗಳು 5 ರೀತಿಯ ಪರಿಸ್ಥಿತಿಗಳನ್ನು ಎದುರಿಸುತ್ತಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ.

(i) ವೈರಿಗಳಿಂದ ವಧಿಸಲ್ಪಡುವುದು: ಇಸ್ರಾಈಲ್ ಸಮುದಾಯಕ್ಕೆ ನೇಮಕಗೊಂಡ ಹಲವು ಪ್ರವಾದಿಗಳನ್ನು ವಧಿಸಲಾಗಿತ್ತೆಂದು ಕುರ್‌ಆನ್ ಸ್ಪಷ್ಟಪಡಿಸಿದೆ: **"ಅವರು ಅಲ್ಲಾಹನ ಕ್ರೋಧಕ್ಕೆ ಪಾತ್ರರಾದರು. ಇದೆಲ್ಲ ಅವರು ಅಲ್ಲಾಹನ ವಚನಗಳನ್ನು ನಿರಾಕರಿಸುತ್ತಿದ್ದುದರ ಮತ್ತು ಪ್ರವಾದಿಗಳನ್ನು ಅನ್ಯಾಯವಾಗಿ ಕೊಲೆಗೈಯುತ್ತಿದ್ದುದರ ಫಲವಾಗಿತ್ತು."**

**(ಪವಿತ್ರ ಕುರ್‌ಆನ್,2: 61)**

(ii) ಪ್ರವಾದಿಗಳನ್ನು ಅಲ್ಲಾಹನ ವಿಶೇಷ ನೆರವಿನಿಂದ ರಕ್ಷಿಸಿ ವೈರಿಗಳನ್ನು ಸರ್ವನಾಶಗೊಳಿಸಲಾಗಿತ್ತು: ನೂಹ್, ಹೂದ್, ಸಾಲಿಹ್, ಶುಐಬ್, ಲೂತ್(ಅ) ಮುಂತಾದ ಪ್ರವಾದಿಗಳು ಆ ಪ್ರಕಾರ ವೈರಿಗಳ ಹಿಂಸೆ ಮರ್ದನಗಳಿಂದ ವಿಮೋಚನೆ ಪಡೆದಿದ್ದರು. ಅವರನ್ನು ವಿರೋಧಿಸಿದವರು ಅಲ್ಲಾಹನ ಶಾಪ ಕೋಪಗಳಿಗೆ ಗುರಿಯಾಗಿ ಭೂಮಿಯಿಂದ ಉಚ್ಚಾಟನೆಗೊಂಡರು.

(iii) ಆಡಳಿತಗಾರರಾದ ಪ್ರವಾದಿಗಳು: ಪ್ರವಾದಿ ದಾವೂದ್(ಅ) ಮತ್ತು ಪ್ರವಾದಿ ಸುಲೈಮಾನ್‌ರು(ಅ) ಅವರಲ್ಲಿ ಸೇರಿದ್ದಾರೆ.

(iv) ತಮ್ಮ ವ್ಯಕ್ತಿತ್ವ ಮತ್ತು ಚಾರಿತ್ರ್ಯದಿಂದ ಜನಾಕರ್ಷಣೆ ಪಡೆದು ಸಮಾಜದ ಅಧಿಕಾರಕ್ಕೆ ತಲಪಿದವರು: ಪ್ರವಾದಿ ಯೂಸುಫ್(ಅ) ಅವರು ಅದರ ಉತ್ತಮ ಉದಾಹರಣೆಯಾಗಿದ್ದಾರೆ. ಪ್ರವಾದಿಗಳ ಸಂದೇಶ ಪ್ರಚಾರದಲ್ಲಿ ಯಶಸ್ವಿಯಾಗಿ ಅಧಿಕಾರಕ್ಕೇರಿದವರೂ ಇದ್ದಾರೆ.

(v) ವೈರಿಗಳ ಮರ್ದನ ಸಹಿಸಲಾಗದೆ ಸ್ವಜನತೆಯಲ್ಲಿ ದಾಯಭಾರವನ್ನು ಪೂರೈಸಿ ಹಿಜ್ರತ್ ಹೋದವರು: ಪ್ರವಾದಿ ಮುಹಮ್ಮದ್(ಸ) ಹಾಗೂ ಇತರ ಕೆಲವು ಪ್ರವಾದಿಗಳ ಜೀವನಾನುಭವಗಳು ಇದಕ್ಕೆ ಸಾಕ್ಷಿಯಾಗಿದೆ.

5. ಪ್ರವಾದಿ ಮುಹಮ್ಮದ್(ಸ) ಮತ್ತು ಅನುಯಾಯಿಗಳು ಮಕ್ಕಾದಲ್ಲಿ ಕ್ರೂರವಾಗಿ ಹಿಂಸೆಗೀಡಾದರು. ವಿಶೇಷವಾಗಿ ಹಿಂದುಳಿದ ವರ್ಗದ ಜನರು. ಅಮ್ಮಾರ್, ಯಾಸಿರ್, ಸುಮಯ್ಯಾ, ಬಿಲಾಲ್, ಖಬ್ಬಾಬ್, ಖುಬೈಬ್(ರ) ಮುಂತಾದವರು ಅತಿ ಕಠೋರ

ಹಿಂಸೆಗಳನ್ನು ಅನುಭವಿಸಬೇಕಾಯಿತು. ಅದೇ ವೇಳೆ ಪ್ರವಾದಿಯವರಿಗೂ ಅನುಯಾಯಿಗಳಿ ಮರಣದ ಬಗ್ಗೆ ಕೊಂಚವೂ ಭೀತಿಯಿರಲಿಲ್ಲ. ವಧಿಸಲ್ಪಟ್ಟರೆ ಸ್ವರ್ಗ ದೊರೆಯುವುದೆ ಧೃಢ ವಿಶ್ವಾಸ ಅವರಿಗಿದ್ದಿತು. ಆದರೂ ಮದೀನಾದಲ್ಲಿ ಇಸ್ಲಾಮಿ ರಾಷ್ಟ್ರ ಸ್ಥಾಪನೆಯಾಗ ತನಕ ಸಶಸ್ತ್ರ ಪ್ರತೀಕಾರ ಅಥವಾ ಪ್ರತ್ಯಾಕ್ರಮಣದ ಕ್ರಮ ಕೈಗೊಳ್ಳಲಿಲ್ಲ. ಬೇಕಿದ್ದರೆ ಮ ಭೀತಿಯಿಲ್ಲದ ಮಕ್ಕಾದ ಇಸ್ಲಾಮಿ ಗುಂಪು ತಮ್ಮ ವಿರೋಧಿಗಳಾದ ಅಬೂಜಹ ಅಬೂಲಹಬ್, ಉತ್ಬ, ಉಮೈಯಾ ಮುಂತಾದ ಕುರೈಶಿ ಪ್ರಮುಖರ ವಿರುದ್ಧ ಸಶಸ್ತ್ರ ಜಿಹಾ ನಡೆಸಬಹುದಾಗಿತ್ತು. ಆದರೆ, ಪ್ರವಾದಿ(ಸ) ಮತ್ತು ಅನುಯಾಯಿಗಳು ಅಂತಹ ಮಾರ್ಗವ ಅನುಸರಿಸಲಿಲ್ಲ. ಅವರಿಗೆ ಅದರ ಅನುಮತಿಯೂ ಇರಲಿಲ್ಲ. ಅವರು ಕ್ಷಮಿಸಿ, ಸಹಿಸಿ ಶಾ ಪಾಲಿಸಿದರು. ಯಾಸಿರ್(ರ) ಕುಟುಂಬವು ಕಠೋರ ಮರ್ದನಕ್ಕೆ ಗುರಿಯಾದಾಗ ಪ್ರವಾದಿಯವರು ಸಮಾಧಾನ ಪಡಿಸುತ್ತಾ ಹೀಗೆ ಹೇಳಿದ್ದರು: "ಯಾಸಿರ್ ಕುಟುಂಬವೇ ಸಹನೆ ವಹಿಸಿರಿ. ನಿವ ಸ್ವರ್ಗದ ವಾಗ್ದಾನ ನೀಡಲಾಗಿದೆ." ಖಬ್ಬಾಬ್‌ರು(ರ) ತಮ್ಮ ಮತ್ತು ಸಂಗಡಿಗರ ಯಾತನೆಯ ತೋಡಿಕೊಳ್ಳುತ್ತಾ ಪ್ರವಾದಿಯವರೊಡನೆ(ಸ) ಕೇಳಿದರು: "ನೀವು ನಮಗಾಗಿ ಅಲ್ಲಾಹನೊ ಪ್ರಾರ್ಥಿಸುವುದಿಲ್ಲವೇ? ಸಹಾಯ ಯಾಚಿಸುವುದಿಲ್ಲವೇ?" ಅದಕ್ಕೆ ಪ್ರವಾದಿಯವರು(ಸ) ನೆ ಉತ್ತರ ನೀಡಲಿಲ್ಲ. ಬದಲಾಗಿ ಅತ್ಯಧಿಕ ಹಿಂಸೆಗಳನ್ನು ಅನುಭವಿಸಿದ ಪೂರ್ವಜರ ಸ್ಥಿತಿಯ ವಿವರಿಸಿ, ಸಾಧಿಸಲಿರುವ ಮಹಾ ಧ್ಯೇಯವನ್ನು ಸ್ಪಷ್ಟಪಡಿಸಿ, ಅದು ಸಫಲವಾಗುವುದೇ ಭರವಸೆ ನೀಡಿದರು. ಕೊನೆಯಲ್ಲಿ, "ಆದರೆ ನೀವು ಅವಸರ ಪಡುತ್ತಿರುವಿರಿ" ಎಂ ಹೇಳಿದರು. ಅದು ನೀವು ಇನ್ನಷ್ಟು ಸಂಕಷ್ಟಗಳನ್ನು ಅನುಭವಿಸ ಬೇಕಾಗಿದೆಯೆಂಬುದ ಸೂಚನೆಯಾಗಿತ್ತು.

ಹೀಗೆ ಇಸ್ಲಾಮಿ ಪ್ರಚಾರ ಮತ್ತು ಸತ್ಯ ಸಂಸ್ಥಾಪನೆಯ ಹಾದಿ ಯಾವುದು ಮ ಹೇಗೆಂಬುದನ್ನು ಪ್ರವಾದಿ(ಸ) ಸ್ಪಷ್ಟ ಪಡಿಸಿದರು.

6. ಪ್ರವಾದಿ ಮುಹಮ್ಮದ್(ಸ) ಒಳಗೊಂಡಂತೆ ಹಲವು ಪ್ರವಾದಿಗಳು ಯು ಮಾಡಿದ್ದಾರೆ. ಆದರೆ, ಆ ಯುದ್ಧಗಳನ್ನು ಸ್ಥಾಪಿತ ಸಮಾಜ ಮತ್ತು ರಾಷ್ಟ್ರಗಳ ನಾಯಕರ ನೆಲೆಯಲ್ಲಿ ನಿರ್ವಹಿಸಿದ್ದರು. ಸ್ಥಾಪಿತ ಇಸ್ಲಾಮಿ ರಾಷ್ಟ್ರವನ್ನೂ ಜನತೆಯನ್ನೂ ನಾ ಪಡಿಸಲಿಕ್ಕಾಗಿ ಬಂದವರ ವಿರುದ್ಧ ಆ ಯುದ್ಧಗಳು ನಡೆದಿದ್ದವು. ಬದ್ರ್, ಉಹುದ್, ಕಂದಕ ಹುನೈನ್ ಯುದ್ಧಗಳು ಆ ವರ್ಗಕ್ಕೆ ಸೇರಿವೆ.

ಅಂತಿಮ ಪ್ರವಾದಿಯ ಬಳಿಕ ಹ. ಹುಸೈನ್, ಅಬ್ದುಲ್ಲಾ ಬಿನ್ ಝುಬೈರ್( ಮುಂತಾದ ಅನೇಕ ವೀರ ಯೋಧರು ಆಡಳಿತ ಬದಲಾವಣೆ ಮತ್ತು ವ್ಯವಸ್ಥೆ ಸುಧಾರಣೆಗಾಗಿ ಉಜ್ವಲ ಕ್ರಾಂತಿಗಳನ್ನೂ ಹೋರಾಟಗಳನ್ನೂ ನಡೆಸಿದ್ದಾರೆ. ಇತಿಹಾಸದ

ವು ವಹಿಸಿದ ಪಾತ್ರ ಅತ್ಯಂತ ಪ್ರಮುಖವಾಗಿವೆ. ಆದರೆ ಅವು ಮುಸ್ಲಿಮ್ ರಾಷ್ಟ್ರ ಮತ್ತು ಮಾಜಗಳಲ್ಲಿ ಸಂಭವಿಸಿತ್ತೆಂಬ ಸತ್ಯವನ್ನು ಮರೆಯಬಾರದು. ಅತ್ಯಂತ ಕೊನೆಯದಾಗಿ, ರಾನಿನಲ್ಲಿ ನಡೆದ ಇಸ್ಲಾಮಿ ಕ್ರಾಂತಿಯು ಒಂದು ಮುಸ್ಲಿಮ್ ರಾಷ್ಟ್ರದ ಆಡಳಿತ ದಲಾವಣೆಗಾಗಿ ನಡೆದಿತ್ತು. ಅದು ಕೂಡಾ ಆಡಳಿತಗಾರರು ಇಸ್ಲಾಮಿ ಹಾದಿಯಿಂದ ಂಪೂರ್ಣ ದೂರ ಸರಿದಂತಹ ಸಂದರ್ಭದಲ್ಲಿ! ಸ್ಥಾಪಿತ ಮುಸ್ಲಿಮ್ ಸಮಾಜ ಮತ್ತು ಾಷ್ಟ್ರದಲ್ಲಿ ನಡೆಯುವ ಘಟನೆಗಳನ್ನು ಸಂಪೂರ್ಣ ಭಿನ್ನವಾದ ಹಿನ್ನೆಲೆಯಲ್ಲಿ ಯಥಾ ಪ್ರಕಾರ ಾರ್ಯಗತಗೊಳಿಸಬೇಕೆಂದು ಭಾವಿಸುವುದು ಸಮಂಜಸವಲ್ಲ. ವಿಶೇಷತಃ ಅದಕ್ಕೆ ವಲಂಬಿಸಬಹುದಾದ ಪ್ರವಾದಿ ಮಾದರಿಗಳಿಲ್ಲದಿರುವಾಗ.

## ಾರತೀಯ ಹಿನ್ನೆಲೆಯಲ್ಲಿ

ಆದ್ದರಿಂದ ಜಮಾಅತೆ ಇಸ್ಲಾಮಿ ಹಿಂದ್ ಶಾಂತಿಯುತ ಮತ್ತು ಕಾನೂನು ಬದ್ಧ ಾರ್ಗಗಳಿಂದ ಸಂದೇಶ ಪ್ರಚಾರ ನಡೆಸಿ ಜನ ಮನಗಳಲ್ಲಿ ಬದಲಾವಣೆ ತರಲು ್ರಯತ್ನಿಸಬೇಕು. ಆ ಮೂಲಕ ದೇಶ ಮತ್ತು ಸಮಾಜದ ಸುಧಾರಣೆಯನ್ನು ಸಾಧಿಸಬೇಕು. ಮಾಅತೆ ಇಸ್ಲಾಮಿಯು ಅದಕ್ಕಾಗಿ ಇಸ್ಲಾಮಿ ತತ್ವ ಸಿದ್ಧಾಂತ ಮತ್ತು ಪ್ರವಾದಿಗಳ ಕಾರ್ಯ ಧಾನವನ್ನು ಮಾದರಿಯಾಗಿ ಅಂಗೀಕರಿಸಿದೆ.



# XIV

# ಜಮಾಅತೆ ಇಸ್ಲಾಮಿಯ ವೈಶಿಷ್ಟ್ಯಗಳು

ಜಮಾಅತೆ ಇಸ್ಲಾಮಿಗೆ ಇತರ ಮುಸ್ಲಿಮ್ ಸಂಘಟನೆಗಳಿಗಿಂತ ಭಿನ್ನವಾದ ಪ ಮುಖ್ಯ ವೈಶಿಷ್ಟ್ಯಗಳಿವೆ.

## 1. ತೌಹೀದ್‌ನ ಸಮಗ್ರತೆ

ತೌಹೀದ್, ಇಸ್ಲಾಮೀ ಜೀವನದ ಕೇಂದ್ರ ಬಿಂದುವಾಗಿದೆ. ಅದು ಜೀವನದ ಎ ರಂಗಗಳಲ್ಲಿ ವ್ಯಾಪಿಸಿದೆ. ಆರಾಧನಾ ಕರ್ಮಗಳಂತೆಯೇ ಕೌಟುಂಬಿಕ, ಸಾಮಾಜಿಕ, ಆರ್ಥಿ ಸಾಂಸ್ಕೃತಿಕ, ರಾಜಕೀಯ ಜೀವನಗಳೂ ತೌಹೀದ್‌ನ ಬುನಾದಿಯಲ್ಲಿರಬೇಕು.

ಅದು ದೇವ ಸಂಪ್ರೀತಿಗೆ ಬದ್ಧವಾದ ಹೊಸ ಜಗತ್ತನ್ನು ನಿರ್ಮಿಸುವ ಸುಧಾರ ಆಂದೋಲನವಾಗಿದೆ. ಅದು ಮಾನವರನ್ನು ಮಾನವರ ಗುಲಾಮಗಿರಿಯಿಂ ವಿಮೋಚನೆಗೊಳಿಸುತ್ತದೆ. ದೇವಧಿಕ್ಕಾರಿಗಳ ಕೈಗಳಿಂದ ಜೀವನದ ಕಡಿವಾಣವನ್ನು ಮ ಪಡೆದು ಅಲ್ಲಾಹನ ಅನುಸರಣಶೀಲ ದಾಸರಿಗೆ ವಹಿಸಿ ಕೊಡುತ್ತದೆ. ಆದ್ದರಿಂದ ತೌಹೀ ಎಲ್ಲ ರೀತಿಯ ಮೂಢನಂಬಿಕೆ, ಅನಾಚಾರ, ಅಕ್ರಮ, ಅನ್ಯಾಯಗಳ ವಿರುದ್ಧ ಹೋರಾಡು ಸುಧಾರಣಾ ಆಂದೋಲನವಾಗಿದೆ.

ಆದರೆ, ಸಾಮ್ರಾಜ್ಯಶಾಹಿ ಅತಿಕ್ರಮಣ ಮತ್ತು ಪಾಶ್ಚಾತ್ಯ ವಿಚಾರಧಾರೆ ಹಾಗ ಸಂಸ್ಕೃತಿಯು ಮುಸ್ಲಿಮ್ ಸಮಾಜದ ಮೇಲೆ ಗಾಢ ಪ್ರಭಾವ ಬೀರಿತು. ಇಸ್ಲಾಮಿನ ಬ ಸರಿಯಾದ ತಿಳುವಳಿಕೆ ಮತ್ತು ಕಲ್ಪನೆಯಿಲ್ಲದ ಪರಂಪರಾಗತ ಮುಸ್ಲಿಮರು ಧಮ ನಿರಪೇಕ್ಷವಾದ ಪಾಶ್ಚಾತ್ಯ ಶಿಕ್ಷಣ ಪಡೆದು ಆಂಶಿಕವಾಗಿ ಅಥವಾ ಸಂಪೂರ್ಣವಾಗಿ ಧಮ ವಿಮುಕ್ತರಾದರು. ಉಳಿದವರು ಇಸ್ಲಾಮಿನ ಬಗ್ಗೆ ಬಹಳ ವಿಕೃತ ದೃಷ್ಟಿಕೋನವ ಇರಿಸಿಕೊಂಡಿದ್ದರು. ದೌರ್ಭಾಗ್ಯ ವಶಾತ್, ಈ ವಿದ್ಯಾವಂತರೇ ಮುಸ್ಲಿಮ್ ಸಮುದಾಯ ನಾಯಕತ್ವಕ್ಕೇರಿದರು. ಅವರು ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಆಡಳಿ ರಂಗಗಳನ್ನು ಸ್ವಾಧೀನ ಪಡಿಸಿದರು. ಮುಸ್ಲಿಮ್ ಸಂಘಟನೆಗಳ ನಾಯಕತ್ವ ಸ್ಥಾನವನು ಉನ್ನತ ಹುದ್ದೆಗಳನ್ನೂ ವಹಿಸಿಕೊಂಡರು. ಇದರಿಂದಾಗಿ ಧರ್ಮ ವಿದ್ವಾಂಸರನ್ನೂ ಅವ ಅಭಿಪ್ರಾಯಗಳನ್ನೂ ಕಡೆಗಣಿಸಲಾಯಿತು. ಅವರಲ್ಲಿ ಕೀಳರಿಮೆ ಬೆಳೆಯಿತು. ಅವ

ಘೋಷಣಾ ಶೈಲಿಯಲ್ಲಿ ಮಾತಾಡ ತೊಡಗಿದರು. ಪಾಶ್ಚಾತ್ಯರನ್ನೂ ಅವರ ದೃಷ್ಟಿಕೋನಗಳನ್ನೂ ವಲು ಪಡೆದ ವಿದ್ವಾಂತರ ದೃಷ್ಟಿಕೋನದನ್ವಯ ಇಸ್ಲಾಮೀ ತತ್ವ ಸಿದ್ಧಾಂತಗಳನ್ನು ಚಿಸಲು ಮತ್ತು ವ್ಯಾಖ್ಯಾನಿಸಲು ಸಿದ್ಧರಾದರು. ಆದ್ದರಿಂದ ಇಸ್ಲಾಮಿನ ಬಗ್ಗೆ ಧಾರಾಳ ತಿಳುವಳಿಕೆಗಳು ಸಮಾಜದಲ್ಲಿ ವ್ಯಾಪಕವಾಗಿ ಪ್ರಚಾರವಾಯಿತು. ಅದರಲ್ಲಿ ತೌಹೀದ್‌ನ ಬೆಳೆದ ವಿಕೃತ ದೃಷ್ಟಿಕೋನವು ಅತ್ಯಂತ ಅಪಾಯಕಾರಿಯಾಗಿತ್ತು. ಹೀಗೆ ಅಪ್ಪಟ ಹೀದ್‌ನ ಕಲ್ಪನೆಯನ್ನು ಸಮುದಾಯವು ಕಳೆದುಕೊಂಡಿತು. ಸಮಗ್ರ ಜೀವನಕ್ಕೆ ಾರವಾಗಬೇಕಿದ್ದ ಆ ಸುಧಾರಣಾ ಸಿದ್ಧಾಂತವನ್ನು ಆರಾಧನಾಲಯಗಳಿಗೆ ಮಿತಗೊಳಿಸಲಾಯಿತು. ಹೊಸ ಜಗತ್ತನ್ನು ನಿರ್ಮಿಸುವ ಆ ಸಮರ್ಥ ದಿವ್ಯಾಸ್ತ್ರವು ರಾಧನಾಲಯಗಳ ಅಂತರಂಗಗಳನ್ನು ಮಾತ್ರ ನಿಯಂತ್ರಿಸುವ ಸಾಧನವಾಗಿ ಮಾರ್ಪಟ್ಟಿತು. ಸ್ಲಿಮ್ ಧರ್ಮ ವಿದ್ವಾಂಸರೂ ಸಂಘಟನೆಗಳೂ ತೌಹೀದ್‌ನ ಈ ಆಂಶಿಕ ಕಲ್ಪನೆಯಲ್ಲಿ ತರಾದರು. ತೌಹೀದ್‌ನ ಸಮಗ್ರತೆಯ ಬಗೆಗಿನ ಸಂವಾದವೂ ಅವರಿಗೆ ಅರೋಚಕವಾಯಿತು. ದಿಗೂ ಸ್ವಲ್ಪ ಮಟ್ಟಿಗೆ ಆ ಸ್ಥಿತಿ ಉಳಿದುಕೊಂಡಿದೆ. ಈ ಹಿನ್ನೆಲೆಯಲ್ಲಿ ತೌಹೀದನ್ನು ಗ್ರವಾಗಿ ಮೈಗೂಡಿಸಿ ಸಮಾಜದ ಮುಂದೆ ಸಮರ್ಪಿಸುತ್ತಿರುವುದೇ ಜಮಾಅತೆ ಇಸ್ಲಾಮಿಯ ್ಯಂತ ಮಹತ್ವಾದ ವೈಶಿಷ್ಟ್ಯವಾಗಿದೆ.

## ಇಸ್ಲಾಮಿನ ಸಂಪೂರ್ಣತೆ

ಇಸ್ಲಾಮ್, ಮಾನವ ಜೀವನದ ಎಲ್ಲ ರಂಗಗಳಿಗೂ ಅವಶ್ಯಕವಾದ ವಿಧಿ ನಿಷೇಧ, ೂನು ನಿರ್ದೇಶಗಳ ಸಾರವಾಗಿದೆ. ಜನನದಿಂದ ಮರಣದ ತನಕ ಜೀವನದ ಎಲ್ಲ ಗಳಿಗೂ ಅನ್ವಯವಾಗುವ ಸಂಪೂರ್ಣ ದೈವಿಕ ವ್ಯವಸ್ಥೆ. ಮಾನವ ಜೀವನದ ಯೊಂದು ಕ್ರಿಯೆಯನ್ನು- ನಡಿಗೆ, ವಿಶ್ರಾಮ, ನಿದ್ರೆ, ಆಹಾರ ಪಾನೀಯ, ಮಾತು, ಕರ್ಮ, ವನೆ, ಅಭಿಲಾಷೆ ಇತ್ಯಾದಿಗಳನ್ನು- ಹೇಗೆ ನಿರ್ವಹಿಸಬೇಕೆಂದು ಕಲಿಸುತ್ತದೆ. ವೈಯಕ್ತಿಕ, ಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ, ಆಡಳಿತ ರಂಗಗಳನ್ನೂ ಅದು ಸ್ಪಷ್ಟವಾಗಿ ವಹರಿಸುತ್ತದೆ. ಇಸ್ಲಾಮ್ ಈ ಎಲ್ಲಾ ರಂಗಗಳನ್ನೂ ಸಮಗ್ರವಾಗಿ ಒಳಗೊಂಡ ಸಂಪೂರ್ಣ ವಸ್ಥೆಯಾಗಿದೆ. ಅದು ಜೀವನದ ಯಾವ ರಂಗವನ್ನೂ ವ್ಯವಹರಿಸದೆ ಬಿಟ್ಟಿಲ್ಲ.

ಆದರೆ, ಮುಸ್ಲಿಮರಲ್ಲಿಯೇ ಇಸ್ಲಾಮಿನ ಬಗ್ಗೆ ನೆಲೆ ನಿಂತಿರುವ ಭಾವನೆಯು ಬಹಳ ು ಮತ್ತು ವಿಚಿತ್ರವಾಗಿದೆ. ಹಲವರಿಗೆ ಅದು ಕೇವಲ ಕೆಲವು ಆರಾಧನಾ ಕರ್ಮ ಮತ್ತು ಾರ ಸಂಪ್ರದಾಯವಾಗಿದೆ. ಅವರ ದೃಷ್ಟಿಯಲ್ಲಿ ಅದು ವೈಯಕ್ತಿಕ ಜೀವನದ ಖಾಸಗಿ ಗಕ್ಕೆ ಸೀಮಿತವಾಗಿದೆ. ಸಾರ್ವಜನಿಕ ರಂಗದಲ್ಲಿ ಅದಕ್ಕೆ ಪ್ರವೇಶವಿಲ್ಲ. ಸಾಮಾಜಿಕ,

ಆರ್ಥಿಕ, ರಾಜಕೀಯ, ಆಡಳಿತ ವ್ಯವಹಾರಗಳಲ್ಲಿ ಧರ್ಮದ ಹಸ್ತಕ್ಷೇಪವು ಭಯೋತ್ಪಾದ ಉಗ್ರವಾದ ಮತ್ತು ಮೂಲಭೂತವಾದವೆಂದು ಅವರು ಪರಿಗಣಿಸುತ್ತಾರೆ. ಧರ್ಮವ ಸಂಕುಚಿತ ವಲಯದಲ್ಲಿ ಬಂಧಿಸಿಡಲಿಕ್ಕಾಗಿ ಇಸ್ಲಾಮಿನ ವೈರಿಗಳು ನಿರಂತರ ನಡೆಸುವ ಪ್ರ ಪ್ರಚಾರಗಳಿಂದ ಮುಸ್ಲಿಮ್ ಜನಸಾಮಾನ್ಯರಲ್ಲದೇ ಧಾರ್ಮಿಕ ಸಂಘಟನೆಗಳೂ ಇಸ್ಲಾಮ ಒಂದು ಸಮಗ್ರ ಜೀವನ ಪದ್ಧತಿಯೆಂಬ ನೆಲೆಯಲ್ಲಿ ಮಂಡಿಸಲು ಹಿಂಜರಿಯುತ್ತ ಮಾತ್ರವಲ್ಲ, ಆ ರೀತಿ ಇಸ್ಲಾಮನ್ನು ಅದರ ನೈಜ ರೂಪದಲ್ಲಿ ಪ್ರಸ್ತುತ ಪಡಿಸುವವರ ಖಂಡಿಸಲೂ ಅವರು ಮುಂದಾಗುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಜಮಾಅತೆ ಇಸ್ಲಾಮಿ ಇಸ್ಲಾಮ್ ಧರ್ಮವನ್ನು ಒಂದು ಸಂಪೂರ್ಣ ಜೀವನ ಪದ್ಧತಿಯಾಗಿ ಮೈ ಗೂಡಿಸಿ ಸಮಾ ಸಮಕ್ಷಮ ಸಮರ್ಪಿಸುತ್ತಿದೆ.

## 3. ಜೀವನವನ್ನು ಸಂಪೂರ್ಣವಾಗಿ ಇಬಾದತ್ (ದಾಸ್ಯ-ಆರಾಧ ಗೊಳಿಸುವುದು

ಸಂಪೂರ್ಣ ಜೀವನವನ್ನು ಅಲ್ಲಾಹನಿಗೆ ಸಮರ್ಪಿಸಿದ ಸತ್ಯ ವಿಶ್ವಾಸಿಯು ಆ ವಿಧಿ- ನಿಷೇಧಗಳನ್ನು ಪಾಲಿಸಿ, ಪುಣ್ಯ ಮತ್ತು ಪ್ರತಿಫಲದ ನಿರೀಕ್ಷೆಯಿಂದ ಮಾಡುವ ಎ ಕರ್ಮಗಳೂ ಇಬಾದತ್ (ದಾಸ್ಯ-ಆರಾಧನೆ) ಗಳಾಗಿವೆ. ವ್ಯಾಪಾರ, ಬೇಸಾಯ, ಕೈಗಾ ಉದ್ಯೋಗ, ಆಹಾರ, ನಿದ್ದೆ, ಎಚ್ಚರ, ದುಡಿಮೆ, ವಿಶ್ರಾಂತಿಗಳಾವುವೂ ಇದರಿಂದ ಹೊರತ ದಾಂಪತ್ಯ ಸಂಬಂಧ, ಕುಟುಂಬದ ಪಾಲನೆ, ತಂದೆ ತಾಯಂದಿರ ಆರೈಕೆ, ಮಕ್ಕಳ ಪೋ ಇತ್ಯಾದಿಗಳೆಲ್ಲವೂ ಇದರಲ್ಲಿ ಸೇರಿವೆ. ಆದ್ದರಿಂದ ಜೀವನವನ್ನು ಸಂಪೂರ್ಣವಾಗಿ ಸೃಷ್ಟಿಕರ್ತ ಅರ್ಪಿಸಿ, ಆತನು ನಿರ್ಣಯಿಸಿದ ಕಾನೂನು ವ್ಯವಸ್ಥೆಗೆ ಬದ್ಧವಾಗಿ ಪುಣ್ಯದಾಯಕ ದಾ ಆರಾಧನೆಯಾಗಿ ಮಾರ್ಪಡಿಸಬೇಕೆಂದು ಇಸ್ಲಾಮ್ ಅಪೇಕ್ಷಿಸುತ್ತದೆ. "ನಾನು ಜಿನ್ನ್ ಮ ಮಾನವ ವರ್ಗಗಳನ್ನು ನನ್ನ ದಾಸ್ಯ- ಆರಾಧನೆಗಾಗಿಯಲ್ಲದೆ ಸೃಷ್ಟಿಸಿಲ್ಲ."

(ಪವಿತ್ರ ಕುರ್‌ಆನ್,51:

ಜಮಾಅತೆ ಇಸ್ಲಾಮಿಯು, ಜೀವನವನ್ನು ಸಂಪೂರ್ಣವಾಗಿ ದಾಸ್ಯ-ಆರಾಧನೆಯ ಮಾರ್ಪಡಿಸಿ, ಪುಣ್ಯಮಯ ಜೀವನ ಸಾಗಿಸಬೇಕೆಂದು ಬಯಸುವ ಆಂದೋಲನವಾಗಿದೆ. ಇ ಇತರ ಸಂಘಟನೆಗಳಿಗಿಂತ ಅದನ್ನು ಭಿನ್ನಗೊಳಿಸುವ ವೈಶಿಷ್ಟ್ಯಗಳಲ್ಲೊಂದಾಗಿದೆ.

## 4. ಇಕಾಮತುದ್ದೀನ್ ಧ್ಯೇಯವಾಗಿರಿಸಿದ ಆಂದೋಲನ

ಜಗತ್ತಿನಲ್ಲಿ ನೇಮಕಗೊಂಡ ಎಲ್ಲ ಪ್ರವಾದಿಗಳೂ ಅಲ್ಲಾಹನ ಪ್ರೀತಿ ಮ

ಫಲದ ಧ್ಯೇಯದಿಂದ ಸೇವೆ ಸಲ್ಲಿಸಿದ್ದರು. ಅದಕ್ಕಾಗಿ ಅವರು ಅಂಗೀಕರಿಸಿದ ಮತ್ತು ೀಕರಿಸುವಂತೆ ಆಜ್ಞಾಪಿಸಿದ ಧ್ಯೇಯವು ಅಲ್ಲಾಹನ ಧರ್ಮದ ಸಂಸ್ಥಾಪನೆಯಾಗಿತ್ತು. ಸ್ಲಿಮರಿಗೂ ಪ್ರಸ್ತುತ ಧ್ಯೇಯವನ್ನು ಅಂಗೀಕರಿಸಿ ಸೇವೆ ಸಲ್ಲಿಸುವಂತೆ ಆದೇಶಿಸಲಾಗಿದೆ. ಾಅತೆ ಇಸ್ಲಾಮಿಯು ಭಾರತದಲ್ಲಿ ಇಕಾಮತುದ್ದೀನನ್ನು ಧ್ಯೇಯವಾಗಿ ಅಂಗೀಕರಿಸಿ, ೀಕರಿಸಿ ಸೇವೆ ಸಲ್ಲಿಸುತ್ತಿರುವ ಏಕೈಕ ಆಂದೋಲನವಾಗಿದೆ.

## ಪರಿಪೂರ್ಣ ಆಂದೋಲನ

ಭಾರತೀಯ ಹಿನ್ನೆಲೆಯಲ್ಲಿ ಇಸ್ಲಾಮೀ ಸಮಾಜವು ಅಂಗೀಕರಿಸಿ ನಿರ್ವಹಿಸಬೇಕಾದ ್ಲ ಕರ್ತವ್ಯಗಳನ್ನೂ ಜಮಾಅತೆ ಇಸ್ಲಾಮಿಯು ಅದರ ಕಾರ್ಯಕ್ರಮದಲ್ಲಿ ಸೇರಿಸಿದೆ. ಸ್ಲಿಮೇತರರಲ್ಲಿ ಇಸ್ಲಾಮಿನ ಸಂದೇಶ ಪ್ರಚಾರ, ಮುಸ್ಲಿಮ್ ಸಮುದಾಯದ ಸುಧಾರಣೆ, ಸ್ಲಿಮ್ ಸಮಾಜದ ಸಾಂಸ್ಕೃತಿಕ ಅಸ್ತಿತ್ವದ ಸಂರಕ್ಷಣೆ, ಸಮುದಾಯ ಭದ್ರತೆ ಇತ್ಯಾದಿಗಳು ಕರಲ್ಲಿ ಸೇರಿದೆ. ಇತರ ಸಂಘಟನೆಗಳು ಈ ಪೈಕಿ ಯಾವುದಾದರೊಂದನ್ನು ಅಥವಾ ಅದರ ದು ಅಂಶವನ್ನು ಮಾತ್ರ ಧ್ಯೇಯವಾಗಿರಿಸಿ ಕಾರ್ಯ ನಿರ್ವಹಿಸುತ್ತಿರುವಾಗ ಒಂದು ಆದರ್ಶ ಾಜವೆಂಬ ನೆಲೆಯಲ್ಲಿ ಎಲ್ಲ ಕರ್ತವ್ಯಗಳನ್ನು ನಿರ್ವಹಿಸಲು ಜಮಾಅತ್ ಪ್ರಯತ್ನಿಸುತ್ತಲಿದೆ.

## ಏಕ ಇಸ್ಲಾಮೀ ನಾಯಕತ್ವ

ಜೀವನವನ್ನು ವಿಭಜಿಸಿ ವಿವಿಧ ಅಂಶಗಳನ್ನು ವಿಭಿನ್ನ ನಾಯಕತ್ವಕ್ಕೆ ವಹಿಸಿಕೊಡುವ ಪ್ರದಾಯವು ಇಸ್ಲಾಮಿಗೆ ಸಂಪೂರ್ಣ ಅಪರಿಚಿತವಾಗಿದೆ. ಕುರ್‌ಆನ್ ಪರಿಚಯ ಪಡಿಸಿದ ವಾದಿಗಳ ಅನುಯಾಯಿಗಳೆಲ್ಲರೂ ಜೀವನದ ಎಲ್ಲ ರಂಗಗಳಲ್ಲಿಯೂ ಆ ಪ್ರವಾದಿಗಳ ಯಕತ್ವವನ್ನು ಅಂಗೀಕರಿಸಿದ್ದರು. ಆರಾಧನಾ ರಂಗದಲ್ಲಿ ಪ್ರವಾದಿಗಳ ಸಂದೇಶಗಳನ್ನೂ ಜಕೀಯ, ಸಾಮಾಜಿಕ ರಂಗಗಳಲ್ಲಿ ಬಹುದೇವ ಕಲ್ಪನೆ ಮತ್ತು ಲೌಕಿಕ ಸಿದ್ಧಾಂತಗಳನ್ನೂ ವಲಂಬಿಸಿದ ಯಾರೂ ಇತಿಹಾಸದಲ್ಲಿ ಕಾಣ ಸಿಗುವುದಿಲ್ಲ. ಆದ್ದರಿಂದ ವಿಶ್ವಾಸೀ ಸಮಾಜದ ್ಲ ಜೀವನ ರಂಗಗಳಲ್ಲಿಯೂ ಇಸ್ಲಾಮೀ ಸಿದ್ಧಾಂತಗಳು ಮಾತ್ರ ನಿರ್ಣಾಯಕ ತೀರ್ಮಾನವನ್ನು ೊಳ್ಳುವ ಆಧಾರವಾಗಿದೆ.

ಆದರೆ ಭಾರತೀಯ ಮುಸ್ಲಿಮರ ಗಣನೀಯ ವಿಭಾಗವು ಇಸ್ಲಾಮಿನ ನಾಯಕತ್ವವನ್ನು, ರ್ಮಿಕ'ವೆಂದು ಹೇಳಬಹುದಾದ ಕೆಲವು ಪರಿಮಿತ ರಂಗಗಳಲ್ಲಿ ಮಾತ್ರ ಅಂಗೀಕರಿಸುತ್ತದೆ. ತರ ಎಲ್ಲ ಪ್ರಮುಖ ರಂಗಗಳಲ್ಲಿಯೂ ಅವರು ಲೌಕಿಕ ವಾದ, ಬಹುದೇವತ್ವ ಮತ್ತು ಸ್ತಿಕತೆಯ ನಾಯಕತ್ವವನ್ನು ಅಂಗೀಕರಿಸುತ್ತಾರೆ. ಇದರಿಂದ ಮುಕ್ತವಾಗಲು ದೌರ್ಭಾಗ್ಯವಶಾತ್

ಭಾರತೀಯ ಮುಸ್ಲಿಮರಿಗೆ ಸಾಧ್ಯವಾಗುವುದಿಲ್ಲ. ಆದರೆ ಜಮಾಅತೆ ಇಸ್ಲಾಮಿಯಲ್ಲಿ ಜೀವ ಎಲ್ಲ ರಂಗಗಳಲ್ಲಿಯೂ ಎಲ್ಲ ಪ್ರಧಾನ ಕಾರ್ಯಗಳನ್ನೂ ಇಸ್ಲಾಮೀ ಸಿದ್ಧಾಂತ ಆಧಾರದಲ್ಲಿ ತೀರ್ಮಾನಿಸಲಾಗುತ್ತದೆ. ರಾಜಕೀಯವೂ ಸೇರಿದಂತೆ ಯಾವ ರಂಗವನ್ನೂ ಇ ಇಸ್ಲಾಮೇತರ ಸಿದ್ಧಾಂತಗಳಿಗೆ ಬಿಟ್ಟು ಕೊಡುವುದಿಲ್ಲ. ಇದು ಶುದ್ಧ ಇಸ್ಲಾಮೀ ಸಂಪ್ರದಾಯವ

## 7. ಭದ್ರ ಸಂಘಟನಾ ವ್ಯವಸ್ಥೆ

ಜಮಾಅತೆ ಇಸ್ಲಾಮಿಯು ಬಹಳ ಸುವ್ಯವಸ್ಥಿತ ಮತ್ತು ಸುಭದ್ರವಾಗಿ ಕಾ ನಿರ್ವಹಿಸುತ್ತಿರುವ ಆಂದೋಲನವಾಗಿದೆ. ಅದರ ಸಂಘಟನಾ ವ್ಯವಸ್ಥೆ ಶಿಸ್ತು ಬದ್ಧವಾಗಿ ಭಾರತದಲ್ಲಿ ಇಸ್ಲಾಮೀ ಚಟುವಟಿಕೆಯನ್ನು ನಿರ್ವಹಿಸುವ ಒಂದು ಮಾದರೀ ಸಮಾಜವ ಬೆಳೆಸುವುದೇ ಅದರ ಧ್ಯೇಯ. ಆದ್ದರಿಂದ ಸಂಘಟನಾ ಕಾರ್ಯಗಳಿಗೂ ಕಾರ್ಯಕರ್ತ ಶಿಕ್ಷಣಕ್ಕೂ ಜಮಾಅತ್ ವಿಶೇಷ ಒತ್ತು ನೀಡುತ್ತದೆ. ಧೋರಣೆ ಮತ್ತು ಕಾರ್ಯಕ್ರಮಗಳಲ್ಲಿಯ ಅದನ್ನು ಸೇರಿಸಿದೆ. ಜಮಾಅತ್ ಅದರ ಸದಸ್ಯರು ಮತ್ತು ಕಾರ್ಯಕರ್ತರ ಬೌದ್ಧಿಕ, ವೈಚಾ ಶೈಕ್ಷಣಿಕ, ಕ್ರಿಯಾತ್ಮಕ, ಧಾರ್ಮಿಕ ಮತ್ತು ನೈತಿಕವಾದ ಸರ್ವತೋಮುಖ ತರಬೇತಿ ಮ ಸಂಘಟನೆಯ ಆಂತರಿಕ ಸುಭದ್ರತೆಯ ವಿಶೇಷ ವ್ಯವಸ್ಥೆ ಮಾಡುವುದು. ಅಲ್ಲಾಹನೊಂ ಅವರ ಸಂಬಂಧ ಹೆಚ್ಚು ಸುದೃಢವಾಗುವಂತೆ, ಅವರು ತಮ್ಮ ಇಡೀ ಜೀವನದಲ್ಲಿ ಇಸ್ಲಾವಿ ನೈಜ ಅನುಯಾಯಿಗಳಾಗುವಂತೆ ಧರ್ಮ ಸಂಸ್ಥಾಪನೆಗಾಗಿ ಸಕ್ರಿಯರಾಗುವಂತೆ ದೆ ಮಾರ್ಗದಲ್ಲಿ ತ್ಯಾಗ, ಸಹನೆ ಮತ್ತು ಧೃಢಚಿತ್ತತ್ತೆಯನ್ನು ಪ್ರದರ್ಶಿಸುವಂತೆ ಹಾಗೂ ಶಿ ಮತ್ತು ಸಂಘಟನೆಯ ದೃಷ್ಟಿಯಿಂದ ಅವರನ್ನು ಉಕ್ಕಿನಿಂದ ಎರಕ ಹೊಯ್ದ ಭ ಗೋಡೆಯಂತೆ ಮಾಡಲು ಶ್ರಮಿಸುವುದು. ಇದು ಜಮಾಅತ್‌ನ ಪ್ರಥಮ ಮತ್ತು ಅತ್ಯ ಗಮನದ ಕಾರ್ಯವಾಗಿರುವುದು. (ಧೋರಣೆ: ಪರಿಚ್ಛೇದ:

ಆಂದೋಲನದ ಸ್ಥಾಪಕ ನಾಯಕರಾಗಿದ್ದ ಸಯ್ಯದ್ ಅಬುಲ್ ಆಲಾ ಮೌದೂದಿಯವ ಈ ಬಗ್ಗೆ ಸಂಘಟನೆಯ ಧೋರಣೆಯನ್ನು ಹೀಗೆ ವಿವರಿಸಿದ್ದಾರೆ: "ಮುಸ್ಲಿಮರ ಯಾವು ಆಂದೋಲನದ ಸೋಲಿಗೆ, ಆರಂಭದಲ್ಲಿ ಯಶಸ್ವಿಯಾಗಿ ಕೊನೆಗೆ ಪತನ ಗೊಳ್ಳುವುದ ಸಂಘಟಿತ ಶಿಸ್ತಿನ ಕೊರತೆಯೇ ಕಾರಣವೆಂದು ನಾವು ಗ್ರಹಿಸಿದ್ದೇವೆ. ಆದ್ದರಿಂದ ಜಮಾ ಇಸ್ಲಾಮಿಯ ಸಂವಿಧಾನವನ್ನು ಬಹಳ ಕಟ್ಟುನಿಟ್ಟು ಮತ್ತು ಸುಭದ್ರಗೊಳಿಸಲು ನಾ ನಿರ್ಧರಿಸಿದೆವು. ಸಂಘಟನೆಯನ್ನು ಯಾರೇ ತೊರೆದರೂ ಅದನ್ನು ನಿರ್ಲಕ್ಷಿಸುವ ಹೊರ ಸಂಘಟನಾ ವ್ಯವಸ್ಥೆಯನ್ನು ಸಡಿಲಗೊಳಿಸಲಾಗದು. ಏಕೆಂದರೆ, ಅಸಂಘಟಿತವಾದ ಸಂಘಟನ ಸುಸಂಘಟಿತ ಶಕ್ತಿಗಳನ್ನು ಎದುರಿಸಲು ಖಂಡಿತ ಸಾಧ್ಯವಿಲ್ಲ. ಸದಸ್ಯರ ಸಂಖ್ಯೆ ಕಡಿಮೆಯಿರು

ಘಟನೆಯು ಸುಸಂಘಟಿತ ಮತ್ತು ವಿವೇಕ ಪೂರ್ಣವಾಗಿ ಕಾರ್ಯವೆಸಗಿದರೆ ಇಡೀ ಾಜವನ್ನು ನಿಯಂತ್ರಿಸಲು ಸಾಧ್ಯವಾಗಬಹುದು. ಅದರ ಬದಲಿಗೆ ನೀವು ಲಕ್ಷಗಟ್ಟಲೆ ದಿಯನ್ನು ಒಟ್ಟು ಸೇರಿಸಿದರೂ ಅವರನ್ನು ಸೂಕ್ತ ರೀತಿಯಲ್ಲಿ ಸಂಘಟಿಸದಿದ್ದರೆ ಯಾವ ವಟಿಕೆಯೂ ಅವರಿಂದ ಸಾಧ್ಯವಿಲ್ಲ. ಈ ಕಾರಣದಿಂದಲೇ ಇಸ್ಲಾಮಿನ ದೃಷ್ಟಿಯಲ್ಲಿ ಸ್ಲಿಮನಾಗಲಿಕ್ಕೆ ಬೇಕಾದ ಅತಿ ಕನಿಷ್ಠ ಉಪಾಧಿಗಳನ್ನು ಜಮಾಅತೆ ಇಸ್ಲಾಮಿಯು ಸ್ಯತನಕ್ಕೆ ನಿಗದಿ ಪಡಿಸಿದೆ. ನಮ್ಮ ಪರವಾಗಿ ನಾವು ಏನನ್ನೂ ಅದರಲ್ಲಿ ಸೇರಿಸಿಲ್ಲ. ಸ್ಲಿಮರ ಮೇಲೆ ಅಲ್ಲಾಹನು ಹೇರಿದ ಕರ್ತವ್ಯಗಳನ್ನು ನಿರ್ವಹಿಸಬೇಕೆಂದಷ್ಟೇ ನಾವು ಮ್ಮ ಎಲ್ಲ ಕಾರ್ಯಕರ್ತರಲ್ಲಿಯೂ ಅಪೇಕ್ಷಿಸುತ್ತಿದ್ದೇವೆ. ಪ್ರಸ್ತುತ ಕರ್ತವ್ಯ ನಿರ್ವಹಣೆಯಲ್ಲಿ ವ ಸಡಿಲಿಕೆಯನ್ನೂ ಸಹಿಸುವುದಿಲ್ಲ. ಹಾಗೆಯೇ ಇಸ್ಲಾಮ್ ನಿಷಿದ್ಧಗೊಳಿಸಿದ ಯಾವುದಾದರೂ ರ್ಯವನ್ನು ಮಾಡುವ ಯಾರೊಬ್ಬರೂ ಜಮಾಅತ್‌ನ ಸದಸ್ಯರಾಗಿರಲಾರರು.”



# XV

# ಜಮಾಅತೆ ಇಸ್ಲಾಮಿ : ಸೇವಾ ರಂಗದಲ್ಲಿ

ಕಳೆದ ಆರು ದಶಕಗಳಿಂದ ಭಾರತದಲ್ಲಿ ಸಕ್ರಿಯವಾಗಿರುವ ಜಮಾಅತೆ ಇಸ್ಲಾಮಿ ಸಾಮಾಜಿಕ ಜೀವನದ ಎಲ್ಲ ರಂಗಗಳಲ್ಲಿಯೂ ಗಮನಾರ್ಹ ಮತ್ತು ಉಪಯುಕ್ತ ಸಲ್ಲಿಸುತ್ತಿದೆ. ಮುಸ್ಲಿಮೇತರ ಬಹು ಸಂಖ್ಯಾತ ಸಮಾಜದಲ್ಲಿ ಇಸ್ಲಾಮೇತರ ವ್ಯವಸ್ಥೆ ಆಶ್ರಯದಲ್ಲಿ ಜಮಾಅತೆ ಇಸ್ಲಾಮಿಯಂತೆ ಸುಭದ್ರ ಮತ್ತು ಸುಸಂಘಟಿತವಾಗಿ ಆರು ದಶ ಕಾಲ ನೆಲೆ ನಿಂತ ಬೇರೆ ಸುಧಾರಣಾ ಆಂದೋಲನವು ಇತಿಹಾಸದಲ್ಲಿಲ್ಲ. ತೀವ್ರ ಪ್ರತಿಕ ಪರಿಸ್ಥಿತಿಯಲ್ಲಿಯೂ ಹೇಳ ತಕ್ಕಂತಹ ಲೋಪವಿಲ್ಲದೆ ಸಕ್ರಿಯವಾಗಿ ನೆಲೆನಿಂತು ಧ ಸೇವೆಯ ಹೆದ್ದಾರಿಯಲ್ಲಿ ಯಶಸ್ವಿಯಾಗಿ ಮುನ್ನಡೆಯಲು ಜಮಾಅತೆ ಇಸ್ಲಾಮಿಗೆ ಸಾಧ್ಯವಾ

## ವಿಶ್ವಾಸದ ರಂಗದಲ್ಲಿ

ಜಮಾಅತ್ ರಂಗಕ್ಕಿಳಿಯುವ ಮುಂಚೆ ಪಾಶ್ಚಾತ್ಯ ಭೌತಿಕ ಪ್ರಭಾವಿತ ಮುಸ್ಲಿಮ ಸೇರಿದಂತೆ ಎಲ್ಲ ಜನ ವಿಭಾಗಗಳೂ ಅಲ್ಲಾಹನ ಪರಮಾಧಿಕಾರದ ಬಗೆಗಿನ ಯಾಷ ವಿಮರ್ಶೆಗಳನ್ನು ಕುಹಕದಿಂದ ಆಲಿಸುತ್ತಿದ್ದರು. ಲೌಕಿಕ ಆಡಳಿತ ಮತ್ತು ಆರಾ ಕಾರ್ಯಗಳಲ್ಲಿ ಮಾತ್ರವಲ್ಲದೇ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ-ರಾಜಕೀಯ ರಂಗಗಳಲ್ಲಿಂ ದೇವನಿಗೆ ಗರಿಷ್ಠ ಅಧಿಕಾರವಿರುವುದೆಂಬ ಸತ್ಯವನ್ನು ಜಮಾಅತೆ ಇಸ್ಲಾಮಿಯು ಘಂಟಾಘೋಷ ಸಾರಿದಾಗ ಗೇಲಿ ಮಾಡಿದ ಕೆಲವರಾದರೂ ಇಂದು ಆ ಪ್ರಯೋಗವನ್ನು ಸ್ವತಃ ಬಳಸುತ್ತಿದಾ

ಇಸ್ಲಾಮ್ ಕೇವಲ ಕೆಲವು ಆಚಾರ ಕರ್ಮಗಳೆಂಬ ತಪ್ಪು ತಿಳುವಳಿಕೆಯನ್ನು ನೀಗಿ ನಿಟ್ಟಿನಲ್ಲಿ ಜಮಾಅತೆ ಇಸ್ಲಾಮಿ ಸ್ವಲ್ಪ ಮಟ್ಟಿಗೆ ಯಶಸ್ವಿಯಾಗಿದೆ. ಇಸ್ಲಾಮನ್ನು ಒ ಸಮಗ್ರ ಜೀವನ ಪದ್ಧತಿ ಮತ್ತು ತತ್ವ ಸಿದ್ಧಾಂತವಾಗಿ ಪ್ರಚಾರ ಮಾಡುವುದನ್ನು ಅಕ್ಷ ಅಪರಾಧವೆಂದು ಆರೋಪಿಸುತ್ತಿದ್ದ ಮಂದಿಯೇ ಪ್ರಸ್ತುತ ಎಲ್ಲ ವ್ಯಾಖ್ಯೆಗಳನ್ನೂ ಇಸ್ಲಾ ಕುರಿತು ಹೇಳಲಾರಂಭಿಸಿದ್ದಾರೆ.

ಮುಸ್ಲಿಮರು ಕೇವಲ ಒಂದು ಪರಂಪರಾಗತ ಸಮುದಾಯವೆಂಬ ಭಾವನೆಯನ್ನು ಅದು ಆದರ್ಶ ಸಮಾಜ ಮತ್ತು ಕ್ರಾಂತಿಕಾರಿ ಸಂಘವೆಂಬ ವಾಸ್ತವಿಕತೆಯನ್ನು ಸಾಬೀತುಪಡಿ ನಿಟ್ಟಿನಲ್ಲಿಯೂ ಮಾಅತ್ ಯಶಸ್ಸು ಗಳಿಸಿದೆ. ಇಂದು ಮುಸ್ಲಿಮೇತರರಲ್ಲಿಯೂ ಇಸ್ಲಾಮ

ು ಸಮಗ್ರ ಜೀವನ ವ್ಯವಸ್ಥೆ ಮತ್ತು ಆ ವ್ಯವಸ್ಥೆಯನ್ನು ಅಂಗೀಕರಿಸುವ ಮುಸ್ಲಿಮರನ್ನು ರ್ಶ ಸಮಾಜವೆಂದು ಮನಗಂಡ ಅನೇಕ ಮಂದಿಯಿದ್ದಾರೆ. ಇಸ್ಲಾಮ್ ಮಾನವ ೋಚನೆಯ ಧರ್ಮವೆಂದು ಮುಸ್ಲಿಮರಂತೆಯೇ ಮುಸ್ಲಿಮೇತರರಲ್ಲಿಯೂ ಇಂದು ರರಾದರೂ ಹೇಳುತ್ತಿದ್ದಾರೆ. ಇದರಲ್ಲಿ ಜಮಾಅತೆ ಇಸ್ಲಾಮಿಯ ಸಂದೇಶ ಪ್ರಚಾರದ ಾವವಿದೆಯೆಂಬುದನ್ನು ನಿರಾಕರಿಸುವಂತಿಲ್ಲ.

ಮುಸ್ಲಿಮ್ ಸಮುದಾಯದ ವಿದ್ಯಾವಂತರ ಮನಸ್ಸು, ವಿಚಾರ, ವೇಷ ಭೂಷಣ, ಷೆ, ಸಂಸ್ಕೃತಿ, ಆಚಾರ, ಗುಣ ನಡತೆಯೆಲ್ಲವೂ ಪಾಶ್ಚಾತೀಕರಣಗೊಂಡ ಹಂತದಲ್ಲಿ ಾಅತೆ ಇಸ್ಲಾಮಿ ಕಾರ್ಯಾರಂಭಿಸಿತು. ಧರ್ಮ ಪಂಡಿತರಿಗೂ ಪಾಶ್ಚಾತ್ಯ ಭೌತಿಕತೆಯ ಪ್ರಸಾರವನ್ನು ತಡೆಯಲಾಗಲಿಲ್ಲ. ಮೊದ ಮೊದಲು ಬೆದರಿದ ಅವರು ಕ್ರಮೇಣ ರಿಮೆಯಿಂದಾಗಿ ಕ್ಷಮಾಪಣೆಯ ಸ್ವರದಲ್ಲಿ ಮಾತಾಡ ತೊಡಗಿದರು. ವಿದ್ಯಾವಂತರು ಾರೋಪಿನ ಹೊಗಳು ಭಟ್ಟರಾದರು ಮತ್ತು ಸಮುದಾಯ ನಾಯಕರು ಅವರ ತಾಳಕ್ಕೆ ್ತೆ ಕುಣಿಯುವವರಾದರು. ಈ ಪಾಶ್ಚಾತೀಕರಣದ ಪ್ರತಿರೋಧದಲ್ಲಿ ಜಮಾಅತೆ ಇಸ್ಲಾಮಿ ಾನ ಪಾತ್ರ ವಹಿಸಿತು. ಸಮುದಾಯದಲ್ಲಿ ವಿಶ್ವಾಸ, ಸ್ವಾಭಿಮಾನ ಮತ್ತು ವಿಶ್ವಾಸ ್ಥೆಯನ್ನು ಬೆಳೆಸಿತು. ಇಸ್ಲಾಮಿನ ವಿಚಾರಧಾರೆಯು ಲೌಕಿಕ ಸಂಸ್ಕೃತಿ ಮತ್ತು ವಿಚಾರಧಾರೆಯನ್ನು ರಿಸಿದ್ದೆಂದು ಅವರಿಗೆ ಮನವರಿಕೆ ಮಾಡಿಸಿತು. ಇಸ್ಲಾಮಿ ನಿಷ್ಠೆ ಮತ್ತು ಸಾಂಸ್ಕೃತಿಕ ನ್ಯತೆಯನ್ನು ಉಳಿಸಿಕೊಳ್ಳುವಂತೆ ಕರೆ ನೀಡಿತು.

ನಾಸ್ತಿಕತೆ, ಧರ್ಮ ರಾಹಿತ್ಯ, ಧರ್ಮ ನಿಷೇಧ, ಕಮ್ಯೂನಿಝಮ್, ಭಂಡವಾಳಶಾಹಿತ್ವ, ಂಜಕತೆ ಮುಂತಾದ ಭಾರೀ ವಿಪತ್ತು ಮತ್ತು ದೌರ್ಬಲ್ಯಗಳನ್ನು ಅನಾವರಣಗೊಳಿಸಿ ಯುವ ರನ್ನು ಅವುಗಳಿಂದ ವಿಮೋಚನೆಗೊಳಿಸಿ ಇಸ್ಲಾಮಿಗೆ ಹತ್ತಿರಗೊಳಿಸಲು ಜಮಾಅತೆ ್ಲಾಮಿಯ ಚಟುವಟಿಕೆಗಳು ಸಹಾಯಕವಾಯಿತು. ಇಸ್ಲಾಮ್, ಅನ್ಯ ವಿಚಾರಧಾರೆಗಳನ್ನು ು ಪಡೆಯ ಬೇಕಾದಷ್ಟು ದರಿದ್ರವಲ್ಲ. ಅದು ವಿಶೇಷ ಅಸ್ತಿತ್ವ ಶಕ್ತಿಯಿರುವ ದೈವಿಕ ಸಿದ್ಧಾಂತವೆಂದು ಜಮಾಅತ್ ಮನಗಾಣಿಸಿತು. ತನ್ಮೂಲಕ ಇಸ್ಲಾಮಿ ಸಿದ್ಧಾಂತ ಮತ್ತು ರ ಆಧಾರದಲ್ಲಿರುವ ಸಾಮಾಜಿಕ ವ್ಯವಸ್ಥೆಗಾಗಿ ಶ್ರಮಿಸುವ ಯುವ ಸಮಾಜವನ್ನು ಸಲು ಅದಕ್ಕೆ ಸಾಧ್ಯವಾಯಿತು. ಜಮಾಅತ್‌ನೊಂದಿಗೆ ಸಾಂಘಿಕ ಸಂಬಂಧವಿಲ್ಲದ ಅನೇಕ ದಿ ಇಸ್ಲಾಮನ್ನು ಈ ರೀತಿ ಮೈಗೂಡಿಸಿದವರಾಗಿದ್ದಾರೆ.

ಮೂಢನಂಬಿಕೆ, ಕಂದಾಚಾರ ಮತ್ತು ಅನಾಚಾರಗಳನ್ನು ಬಲಪಡಿಸಲಿಕ್ಕಾಗಿ ತೀವ್ರವಾಗಿ ುತ್ನಿಸುತ್ತಿರುವ ಸಂಪ್ರದಾಯವಾದದ ಉರುಳುಗಳಿಂದ ಹಾಗೂ ಲೌಕಿಕ ವಾದಿಗಳಿಗೆ ುದಾಯದಲ್ಲಿ ದಾರಿ ಮಾಡಿಕೊಡುತ್ತಿರುವ ಮೊಡರ್ನಿಸ್ಟ್ ತಂತ್ರಗಳನ್ನೂ ತೆರೆದು

ತೋರಿಸುವ ನಿಟ್ಟಿನಲ್ಲಿ ಜಮಾಅತ್ ಪ್ರಧಾನ ಪಾತ್ರ ವಹಿಸಿತು. ಇಂತಹ ಚಟುವಟಿಕೆ ಈಗಲೂ ನಿರಂತರ ಮುಂದುವರಿಯುತ್ತಿದೆ.

ಜಮಾಅತೆ ಇಸ್ಲಾಮಿಯು ಸಮುದಾಯದ ನೆರವಿನಿಂದ ಕಮ್ಯೂನಿಸ್ಟ್, ಮೊಡರ್ನಿ ವಿಚಾರವಾದಿ ಮತ್ತು ಶರೀಅತ್ ವಿರೋಧಿಗಳನ್ನು ಎದುರಿಸುವ ಕಾರ್ಯದಲ್ಲಿ ಯಶಸ್ವಿಯಾಯಿ ಮುಸ್ಲಿಮೇತರರಿಗೆ ಇಸ್ಲಾಮಿನ ಸಂದೇಶ ತಲುಪಿಸಬೇಕಾದುದು ಮುಸ್ಲಿಮರ ಕರ್ತವ್ಯವೆ ಮನಗಾಣಿಸಲಿಕ್ಕಾಗಿ ನಿರಂತರ ಶ್ರಮಿಸುವುದರ ಜತೆಗೆ ಮುಸ್ಲಿಮೇತರರಿಗೆ ವಿವಿಧ ರೀತಿಯ ಇಸ್ಲಾಮಿನ ಸಂದೇಶವನ್ನು ಅದು ತಲುಪಿಸುತ್ತಿದೆ.

ಜಮಾಅತೆ ಇಸ್ಲಾಮಿಯು ಸಂಕುಚಿತ ರಾಷ್ಟ್ರೀಯತೆ, ಕೋಮುವಾದ, ಫ್ಯಾಸಿಝ ಕುರುಡು ಜನಾಂಗೀಯತೆಯಂತಹ ವಿಪತ್ತುಗಳ ಜಾಗೃತಿಗಾಗಿ ನಿರಂತರ ಪ್ರಯತ್ನಿಸುತ್ತ

## ಪ್ರಕಾಶನ ರಂಗದಲ್ಲಿ

ಭಾರತದ ಎಲ್ಲ ರಾಜ್ಯಗಳಲ್ಲಿಯೂ ಕಾರ್ಯ ನಿರ್ವಹಿಸುತ್ತಿರುವ ಜಮಾ ಇಸ್ಲಾಮಿಯು ಹಿಂದಿ, ಇಂಗ್ಲೀಷ್, ಉರ್ದು, ಬಂಗಾಳಿ, ಅಸ್ಸಾಮಿ, ಪಂಜಾಬಿ, ಗುಜರ ಮರಾಠಿ, ತೆಲುಗು, ಕನ್ನಡ, ತಮಿಳು, ಮಳೆಯಾಳಂ ಮುಂತಾದ ಪ್ರಮುಖ ಭಾಷೆಗ ಪ್ರಕಾಶನಾಲಯಗಳನ್ನು ನಡೆಸುತ್ತಿದೆ. ಕುರ್‌ಆನ್ ಅನುವಾದಗಳೂ ಸೇರಿದಂತೆ ಅ ಪುಸ್ತಕಗಳನ್ನು ಅವು ಪ್ರಕಟಿಸುತ್ತಿವೆ. ಎಲ್ಲ ವರ್ಗಗಳ ಅನೇಕ ಮಂದಿ ಇಸ್ಲಾ ಅಧ್ಯಯನಕ್ಕಾಗಿ ಜಮಾಅತ್ ಸಾಹಿತ್ಯಗಳನ್ನು ಅವಲಂಬಿಸುತ್ತಾರೆ. ದೇಶದ ಹೆಚ್ಚಿ ಭಾಷೆಗಳಲ್ಲಿ ಕುರ್‌ಆನಿನ ಅನುವಾದ ಮತ್ತು ವ್ಯಾಖ್ಯಾನ ಗ್ರಂಥಗಳನ್ನೂ, ಹದೀಸ್, ಪ್ರವ ಜೀವನ ಚರಿತ್ರೆ ಹಾಗೂ ಇತರ ಇಸ್ಲಾಮೀ ಸಾಹಿತ್ಯಗಳನ್ನೂ ಪ್ರಕಟಿಸಲಾಗಿದೆ.

ಉರ್ದು ಪ್ರಕಾಶನಾಲಯವಾಗಿರುವ 'ಮರ್ಕಝಿ ಮಕ್ತಬಾ ಇಸ್ಲಾಮೀ' ಸಾವಿರ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದೆ. ಕೇರಳದ ಇಸ್ಲಾಮಿಕ್ ಪಬ್ಲಿಷಿಂಗ್ ಹೌಸ್ ಸುಮಾ 700 ಪುಸ್ತಕಗಳನ್ನು ಪ್ರಕಟಿಸಿದೆ. ಕನ್ನಡದ ಪ್ರಕಾಶನ ಸಂಸ್ಥೆಯಾದ 'ಶಾಂತಿಪ್ರಕಾಶನ ಕುರ್‌ಆನ್ ಅನುವಾದ ಮತ್ತು ವ್ಯಾಖ್ಯಾನ ಗ್ರಂಥಗಳೂ ಸೇರಿದಂತೆ ಸುಮಾರು ಇನ್ನೂರೈವತ್ತ ಮಿಕ್ಕಿ ಗ್ರಂಥಗಳನ್ನು ಪ್ರಕಟಿಸಿದೆ. ಅದೇ ರೀತಿ ದೇಶದ ಇತರ ಭಾಷೆಗಳಲ್ಲಿಯೂ ಸಾವಿರ ಇಸ್ಲಾಮೀ ಸಾಹಿತ್ಯಗಳನ್ನು ಪ್ರಕಟಿಸಲಾಗಿದೆ.

ಅದಲ್ಲದೇ ವಿವಿಧ ಭಾಷೆಗಳಲ್ಲಿ ನಿಯತಕಾಲಿಕಗಳೂ ಪ್ರಕಟವಾಗುತ್ತಿವೆ. ದಅ್ವ (ಉರ್ದು ತ್ರಿದಿನ ಪತ್ರಿಕೆ), ಕಾಂತಿ (ಹಿಂದಿ ವಾರ ಪತ್ರಿಕೆ), ಮೀಝಾನ್ (ಬಂಗಾಳಿ ವ

ೃಕೆ), ಶಾಹೀನ್ (ಗುಜರಾತಿ ವಾರ ಪತ್ರಿಕೆ), ಶೋಧನ (ಮರಾಠಿ ವಾರ ಪತ್ರಿಕೆ), ಸನ್ಮಾರ್ಗ ನ್ನಡ ವಾರ ಪತ್ರಿಕೆ), ಗೀಟುರಾಯಿ (ತೆಲುಗು ವಾರ ಪತ್ರಿಕೆ), ಪ್ರಬೋಧನಮ್ (ಮಲೆಯಾಳ ರ ಪತ್ರಿಕೆ), ದೆಹಲಿಯಿಂದ ಪ್ರಕಟವಾಗುವ ರೇಡಿಯನ್ಸ್ ಇಂಗ್ಲೀಷ್ ವಾರ ಪತ್ರಿಕೆ ಮತ್ತು ಳದಲ್ಲಿ ಪ್ರಕಟವಾಗುವ 'ಮಾಧ್ಯಮಮ್' ದೈನಿಕಗಳಲ್ಲಿಯೂ ಜಮಾಅತ್ ಕಾರ್ಯಕರ್ತರ ಮುಖ ಪಾತ್ರವಿದೆ.

## ಮಾಜ ಸೇವೆ

ಸಮಕಾಲೀನ ಮಾನವ ಸಮಾಜಕ್ಕೆ ಜಮಾಅತೆ ಇಸ್ಲಾಮಿಯ ಸಮಾಜ ಸೇವೆಯು ವಾರಾಧನೆಯೆಂಬ ತತ್ವವನ್ನು ಪರಿಚಯಗೊಳಿಸಿತು.

ಇಸ್ಲಾಮ್, ಅಲ್ಲಾಹನು ಮಾನವ ಕುಲಕ್ಕೆ ಅವತೀರ್ಣಗೊಳಿಸಿದ ಜೀವನ ದ್ಧತಿಯಾಗಿದೆ. ಅದು ದೇವದತ್ತವಾಗಿದೆ. ಅಲ್ಲಾಹನು ತನ್ನ ಮತ್ತು ಮಾನವನೊಂದಿಗಿನ ಬಂಧದಂತೆಯೇ ಮಾನವ ಮತ್ತು ಮಾನವನ ಪರಸ್ಪರ ಸಂಬಂಧಕ್ಕೂ ವಿಶೇಷ ಪ್ರಾಮುಖ್ಯ ಿದ್ದಾನೆ.

ಮಾನವೀಯ ಕರುಣೆಯಿಲ್ಲದ ಧರ್ಮವು ನಿರುಪಯುಕ್ತವಾಗಿದೆ. ಸಾಮಾಜಿಕ ಷ್ಠೆಯಿಲ್ಲದ ವಿಶ್ವಾಸಿಯ ಬಗ್ಗೆ ಊಹಿಸಲಿಕ್ಕೂ ಸಾಧ್ಯವಿಲ್ಲ. ಮಾನವೀಯ ಭಾವನೆಗಳನ್ನು ಂಸಲಾಗದವರಿಗೆ ಇಸ್ಲಾಮಿ ವಲಯದಲ್ಲಿ ಸ್ಥಾನವಿಲ್ಲ. ಮಾನವ ಜಗತ್ತಿನ ಘಟನಾವಳಿಗಳು ಕ್ಯ ಸಿಂಹಾಸನದೊಂದಿಗೆ ಅಭೇದ್ಯ ಸಂಬಂಧವನ್ನು ಹೊಂದಿದೆ. ಮಾನವನನ್ನು ತನ್ನ ೃತವೆಂದು ಪರಿಗಣಿಸಿರುವ ಅಲ್ಲಾಹನು ಆತನೊಂದಿಗಿನ ಅವಗಣನೆಯನ್ನು ಅಪರಾಧವೆಂದೂ ಗಣನೆಯನ್ನು ಪುಣ್ಯ ಕರ್ಮವೆಂದೂ ಭಾವಿಸುತ್ತಾನೆ.

ಆದ್ದರಿಂದ ಭಾರತದಲ್ಲಿ ಇಸ್ಲಾಮನ್ನು ಪ್ರತಿನಿಧಿಸುತ್ತಿರುವ ಜಮಾಅತೆ ಇಸ್ಲಾಮಿಗೆ ವಲ ಒಂದು ಪ್ರಚಾರಕ ಸಂಘಟನೆಯಾಗಿ ಉಳಿಯಲು ಸಾಧ್ಯವಿಲ್ಲ. ಜನರ ಸಮಸ್ಯೆಗಳನ್ನೂ ಕಷ್ಟಗಳನ್ನೂ ಅರಿತು ಅದರ ಪರಿಹಾರಕ್ಕಾಗಿ ಅದು ಗರಿಷ್ಠ ಪ್ರಯತ್ನಿಸುತ್ತಿದೆ. ಅದರ ಕಾರ್ಯ ಚಟುವಟಿಕೆಗಳಲ್ಲಿ ಸಮಾಜದ ಸೇವೆಗೆ ವಿಶೇಷ ಮಹತ್ವ ನೀಡಲಾಗಿದೆ.

ಸಾಧ್ಯವಿರುವೆಡೆಗಳಲ್ಲಿ ಜಮಾಅತೆ ಇಸ್ಲಾಮಿ ಝಕಾತ್ ಮತ್ತು ಫಿತ್ರ್ ಝಕಾತ್ ಗ್ರಹಿಸಿ ವಿತರಣೆ ಮಾಡುತ್ತಿದೆ. ಹಲವೆಡೆಗಳಲ್ಲಿ ಝಕಾತ್‌ಗೆ ಸಂಘಟಿತ ವಿತರಣೆ ಮತ್ತು ವ್ಯವಸ್ಥಿತ ಪರಿಹಾರ ಕಾರ್ಯಗಳಿಂದ ಸಮಾಜದ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಲು ರಕ್ಕೆ ಸಾಧ್ಯವಾಗಿದೆ.

ಮನೆ ನಿರ್ಮಾಣ, ಶಿಕ್ಷಣ, ಚಿಕಿತ್ಸೆ, ಉದ್ಯೋಗ, ದಾನ, ಅನಾಥ ನಿರ್ಗ ಸಂರಕ್ಷಣೆ, ವಿಧವೆಯರು, ವಿಕಲಾಂಗರು ಮತ್ತು ವಯೋವೃದ್ಧರಿಗೆ ನೆರವು ಇತ್ಯಾದಿ ಸೆ ಚಟುವಟಿಕೆಗಳಿಗಾಗಿ ಜಮಾಅತೆ ಇಸ್ಲಾಮಿಯು ವರ್ಷಂಪ್ರತಿ ಕೋಟಿಗಟ್ಟಲೆ ರೂಪ ವ್ಯಯಿಸುತ್ತಿದೆ. ದುರಂತಕ್ಕೀಡಾದವರ ನೆರವಿಗಾಗಿ ವಿಶೇಷ ಆಸ್ಥೆ ವಹಿಸುತ್ತಿದೆ.

ಬಂಡವಾಳ ಶಾಹಿಯ ಪ್ರಮುಖ ಶೋಷಣೋಪಾದಿಯಾಗಿರುವ ಬಡ್ಡಿಯ ವಿಪತ್ತಿ ಸಮಾಜವನ್ನು ರಕ್ಷಿಸಲಿಕ್ಕಾಗಿ ಜಮಾಅತೆ ಇಸ್ಲಾಮಿಯು ಅದರ ಸೀಮಿತ ಸಾಮರ್ಥ್ಯ ವ್ಯಾಪ್ತಿಯಲ್ಲಿ ಗರಿಷ್ಠ ಪ್ರಯತ್ನ ನಡೆಸುತ್ತಿದೆ. ಅದಕ್ಕಾಗಿ ಬಡ್ಡಿ ರಹಿತ ಸಾಲ ಸಂಸ್ಥೆಗಳ ನಡೆಸುತ್ತಿದೆ. ಪ್ರಚಲಿತ ಪರಿಸ್ಥಿತಿಯಲ್ಲಿ ಇದು ತೀರಾ ಅಪರ್ಯಾಪ್ತ ವಾಗಿದೆಯಾದ ಗಾಢಾಂಧಕಾರದಲ್ಲಿ ಮಿನುಗು ದೀಪದ ಹೊಣೆಯನ್ನು ನಿರ್ಲಕ್ಷಿಸುವಂತಿಲ್ಲ.

## ಶಿಕ್ಷಣ ರಂಗದಲ್ಲಿ

ಜಮಾಅತೆ ಇಸ್ಲಾಮಿಯು ಸ್ಥಾಪನೆಗೊಂಡ ಕಾಲದಲ್ಲಿ ಮುಸ್ಲಿಮ್ ಸಮಾ ಶೈಕ್ಷಣಿಕ ಸ್ಥಿತಿಯು ಬಹಳ ಶೋಚನೀಯವಾಗಿದ್ದಿತು. ಸಮುದಾಯದಲ್ಲಿ ಧಾರ್ಮಿಕ ವ ಭೌತಿಕ ಶಿಕ್ಷಣ ಪಡೆದವರು ತೀರಾ ವಿರಳರಾಗಿದ್ದರು. ವಿದ್ಯಾವಂತರೂ ಎರಡು ಧ್ರುವಗಳಲ್ಲಿದ್ದ ಧಾರ್ಮಿಕ ವಿದ್ಯಾಭ್ಯಾಸವೆಂದರೆ, ಕೆಲವಾರು ಪ್ರಾಚೀನ ಅರಬಿ ಗ್ರಂಥ ಮತ್ತು ಕರ್ಮಶ ಗ್ರಂಥಗಳ ಅಧ್ಯಯನಕ್ಕೆ ಸೀಮಿತವಾಗಿತ್ತು. ಅದನ್ನು ಗಳಿಸಿದವರಿಗೆ ಕಾಲ, ಜಗತ್ತು ವ ಆಧುನಿಕ ಪರಿಸ್ಥಿತಿಯ ಬಗ್ಗೆ ಏನೂ ತಿಳಿದಿರಲಿಲ್ಲ. ಆದ್ದರಿಂದ ಅವರಿಗೆ ಹೊಸ ಹಿನ್ನೆಲೆಯ ಇಸ್ಲಾಮನ್ನು ಪ್ರತಿಪಾದಿಸಲು ಅಥವಾ ಲೌಕಿಕ ಶಿಕ್ಷಣ ಪಡೆದವರೊಡನೆ ಸಂವಾದ ನಡೆ ಸಾಧ್ಯವಾಗುತ್ತಿರಲಿಲ್ಲ. ಇನ್ನೊಂದೆಡೆ, ಲೌಕಿಕ ಶಿಕ್ಷಣವು ಸಂಪೂರ್ಣ ಧರ್ಮ ರ ಮಾತ್ರವಲ್ಲ ಧರ್ಮ ವಿರೋಧಿಯೂ ಆಗಿತ್ತು. ವಿಜ್ಞಾನ, ಇತಿಹಾಸ ಮತ್ತು ಸಾಮಾ ಅಧ್ಯಯನದ ಹೆಸರಲ್ಲಿ ಧರ್ಮ ನಿಷೇಧ ಮತ್ತು ನಾಸ್ತಿಕತೆಯನ್ನು ಕಲಿಸಲಾಗುತ್ತಿ ಆದ್ದರಿಂದ ಈ ರಂಗದಲ್ಲಿ ಕ್ರಾಂತಿಕಾರಿ ಬದಲಾವಣೆ ಅಗತ್ಯವಾಗಿತ್ತು. ಜಮಾಅತೆ ಇಸ್ಲಾಮಿ ಆರಂಭದಿಂದಲೇ ಈ ವಿಷಯವನ್ನು ಮನಗಂಡು ಅವಶ್ಯಕ ಕ್ರಮಗಳನ್ನು ಕೈಗೊಂಡಿತು. ಶಿ ವಿಭಾಗವೊಂದನ್ನು ಅದಕ್ಕಾಗಿ ರಚಿಸಿತು.

ದೇಶ ವಿಭಜನೆಯ ಬಳಿಕ 1948 ಸೆಪ್ಟಂಬರ್ 28ರಂದು ಪುನರ್ ಸಂಘಟಿಸಿದ ವಿಭಾಗದ ಪ್ರಥಮ ಸಮ್ಮೇಳನ ರಾಮ್ ಪುರದಲ್ಲಿ ಜರಗಿತು. ಅಂದಿನ ತೀರ್ಮಾನದನ್ನ

!9ರಲ್ಲಿ ರಾಂಪುರದಲ್ಲಿ 'ಮರ್ಕಝಿ ದರ್ಸ್‌ಗಾಹೆ ಇಸ್ಲಾಮಿ' ಎಂಬ ವಿದ್ಯಾಲಯವನ್ನು ಪಿಸಲಾಯಿತು. ಮೌ| ಅಫ್ಝಲ್ ಹುಸೈನ್ ಅದರ ನಿರ್ದೇಶಕರಾಗಿದ್ದರು. ಅವರು ಉನ್ನತ ನ್ದೆಯನ್ನು ತೊರೆದು ಆ ಹೊಣೆ ವಹಿಸಿದರು.

ಜಮಾಅತೆ ಇಸ್ಲಾಮಿಯು ಹೊಸ ಪಠ್ಯ ಪದ್ಧತಿ ಮತ್ತು ಅದಕ್ಕೆ ಅವಶ್ಯಕವಾದ ಪಾಠ ¦ಕಗಳನ್ನು ತಯಾರಿಸಿತು. ಅವುಗಳನ್ನು ಉರ್ದು ಪಾಠ ಶಾಲೆಗಳಲ್ಲಿ ಸಾರ್ವತ್ರಿಕವಾಗಿ ಸಲಾಗುತ್ತಿದೆ.

1961ರಲ್ಲಿ ಬಲ್ರಿಯಾಗಂಜ್‌ನಲ್ಲಿ ಸ್ಥಾಪಿಸಲಾದ 'ಜಾಮಿಅತುಲ್ ಫಲಾಹ್' ಉತ್ತರ ರತದ ಪ್ರಮುಖ ಇಸ್ಲಾಮಿ ವಿದ್ಯಾಲಯವಾಗಿದೆ. ಸುಮಾರು 4,500 ವಿದ್ಯಾರ್ಥಿಗಳು ಅಲ್ಲಿ ಯುತ್ತಿದ್ದಾರೆ. ಧಾರ್ಮಿಕ ಮತ್ತು ಲೌಕಿಕ ಶಿಕ್ಷಣವನ್ನು ಸಮನ್ವಯಗೊಳಿಸಿದ ಅಲ್ಲಿನ ರ್ಸಿಗೆ ಅಲಿಗಢ ವಾರ್ಸಿಟಿ ಮತ್ತು ಜಾಮಿಯ ಮಿಲ್ಲಿಯಾಗಳು ಬಿ. ಎ. ಪದವಿಯ ಾನ್ಯತೆ ನೀಡಿದೆ.

1972ರಲ್ಲಿ ರಾಂಪುರದಲ್ಲಿ ಸ್ಥಾಪಿಸಲಾದ 'ಜಾಮಿಯತುಸ್ಸಾಲಿಹಾತ್' ಮಹಿಳೆಯರಲ್ಲಿ ರ್ಮಿಕ, ಲೌಕಿಕ ವಿದ್ವಾಂಸರನ್ನು ರೂಪಿಸುತ್ತಿರುವ ಖ್ಯಾತ ವಿದ್ಯಾಲಯವಾಗಿದೆ. ದೇಶದ ಧ ರಾಜ್ಯಗಳ ವಿದ್ಯಾರ್ಥಿನಿಯರು ಅಲ್ಲಿ ಕಲಿಯುತ್ತಿದ್ದಾರೆ. ಹೈದರಾಬಾದ್‌ನ 'ಜಾಮಿಅ ರುಲ್ ಹುದಾ', ಮಹಾರಾಷ್ಟ್ರದ ಮಾಲೆಗಾಂವ್‌ನ 'ಜಾಮಿಯತುಲ್ ಹುದಾ' ಮತ್ತು ರ್ನಾಟಕದ ಹಾಸನದಲ್ಲಿರುವ 'ಮನ್ಸೂರಾ', ತಮಿಳುನಾಡಿಲ್ಲಿ ಮುಸ್ಲಿಮೇತರರಿಗಾಗಿ 'ವೆಲ್ಲೂರ್ ಸ್ಲಾಮಿಕ್ ಸೆಂಟರ್'ಗಳನ್ನು ಜಮಾಅತ್ ಬಾಂಧವರು ನಡೆಸುತ್ತಿದ್ದಾರೆ. ಇಂತಹ ವಿದ್ಯಾಲಯಗಳ ೂಲಕ ಶೈಕ್ಷಣಿಕ ರಂಗದಲ್ಲಿ ಬಹಳಷ್ಟು ಸುಧಾರಣೆಗಳನ್ನು ಜಮಾಅತ್ ಸಾಧಿಸಿದೆ.

ಲೌಕಿಕ ಮತ್ತು ಆಧ್ಯಾತ್ಮಿಕ ಶಿಕ್ಷಣವನ್ನು ಸಮನ್ವಯ ಗೊಳಿಸಿ ಜಮಾಅತ್ ರೂಪಿಸಿದ ೂಸ ಶಿಕ್ಷಣ ವಿಧಾನವು ಸಮುದಾಯದ ಪ್ರಶಂಸೆಗೆ ಪಾತ್ರವಾಗಿದೆ. ಮಾತ್ರವಲ್ಲ, ುಕರಣೀಯ ಮಾದರಿಯಾಗಿದೆ. ಶಿಕ್ಷಣ ರಂಗದಲ್ಲಿ ಜಮಾಅತೆ ಇಸ್ಲಾಮಿ ಮಾಡಿದ ಹತ್ತರ ಸುಧಾರಣೆ ಮತ್ತು ಹೊಸ ವಿಧಾನವನ್ನು ಕಡೆಗಣಿಸಲು ಸಾಧ್ಯವಿಲ್ಲ.

## ಲಭೆ ಪೀಡಿತರಿಗೆ ನೆರವು

ಗಾಂಧೀಜಿಯ ಹತ್ಯೆಯ ಬಳಿಕ ಸಾಮಾನ್ಯವಾಗಿ ಶಾಂತಗೊಂಡ ಕೋಮು ಗಲಭೆಗಳು 60ರ ದಶಕದಲ್ಲಿ ಪುನಃ ಭಾರತದ ವಾತಾವರಣವನ್ನು ಪ್ರಕ್ಷುಬ್ಧಗೊಳಿಸಿತು. ತರುವಾಯ

ರಾಷ್ಟ್ರದ ವಿವಿಧೆಡೆಗಳಲ್ಲಿ ಹತ್ತು ಸಾವಿರಕ್ಕೂ ಅಧಿಕ ಕೋಮು ಗಲಭೆಗಳು ನಡೆ
ಅದರಿಂದ ಭಾರೀ ನಾಶ ನಷ್ಟಗಳಾದವು. ಸಹಸ್ರಾರು ಮಾನವರು ಹತರಾದರು. ಕೋಟಿಗ
ರೂಪಾಯಿಯ ಸೊತ್ತುಗಳು ನಾಶವಾದವು ಅಥವಾ ದೋಚಲ್ಪಟ್ಟವು. ಅದರಿಂದಾಗಿ ಗ
ಪೀಡಿತ ಪ್ರದೇಶಗಳಲ್ಲಿ ಉಳಿದವರು ಅಕ್ಷರಶಃ ನಿರ್ಗತಿಕರು ಮತ್ತು ನಿರಾಶ್ರಿತರಾ
ಕೋಮು ಗಲಭೆಗಳಿಗೆ ಬಲಿಯಾದವರಿಗೆ ತಾವು ವಾಸಿಸುತ್ತಿದ್ದ ಗುಡಿಸಲುಗಳೂ ಧರಿಸು
ಬಟ್ಟೆ ಬರೆಗಳೂ ವೃತ್ತಿ ಸಾಧನಗಳು ಸುಟ್ಟು ಬೂದಿಯಾಗುತ್ತಿರುವುದ
ದೋಚಲ್ಪಡುತ್ತಿರುವುದನ್ನೂ ಅಸಹಾಯಕವಾಗಿ ನೋಡಬೇಕಾಯಿತು. ಮೊರಾದಾ ಬಾ
ಮೀರತ್, ಅಹ್ಮದಾಬಾದ್, ಅಲೀಗಢ, ಭೀವಂಡಿ, ಭಾಗಲ್ಪುರ, ಗುಜರಾತ್, ಬೊಂಬಾ
ರೂರ್ಕೆಲ, ಜಮ್‌ಷಡ್‌ಪುರ, ನೆಲ್ಲಿ ಮುಂತಾದೆಡೆಗಳಲ್ಲಿ ಅನೇಕ ಮಂದಿ ಕ್ರೂರ ಹಿ
ಗುರಿಯಾದರು. ಅಂತಹ ಸಂದರ್ಭಗಳಲ್ಲಿ ಜಮಾಅತೆ ಇಸ್ಲಾಮಿಯು ಮರ್ದಿತರಿಗೆ ನೆರವಾಯಿ
ನೂರಾರು ಪರಿಹಾರ ನಿಧಿಗಳನ್ನು ರಚಿಸಿ ಕೋಟಿಗಟ್ಟಲೆ ರೂಪಾಯಿ ಸಂಗ್ರಹಿಸಿ ಸಂತ್ರಸ್ತ
ವಿತರಣೆ ಮಾಡಿತು.

1969ರ ಸೆಪ್ಟಂಬರ್‌ನಲ್ಲಿ ಅಹ್ಮದಾಬಾದ್‌ನ ಗಲಭೆ ಪೀಡಿತರಿಗಾಗಿ ಸುಮಾರು
ಲಕ್ಷ ಪರಿಹಾರಧನ ಸಂಗ್ರಹಿಸಿತು. ಮನೆ ಕಳೆದು ಕೊಂಡವರಿಗೆ 137 ಮನೆಗಳನ್ನು ನಿರ್ಮಿಸಿ
ಪ್ರಸ್ತುತ ಮನೆಗಳಿರುವ ನಿವೇಶನವನ್ನು ಮಿಲ್ಲತ್ ಕಾಲನಿ ಎಂದು ಕರೆಯಲಾಗುತ್ತಿ
ಅದಲ್ಲದೇ ಹಾನಿಗೊಂಡ ಮನೆ, ಮಸೀದಿಗಳನ್ನು ದುರಸ್ತಿಗೊಳಿಸಿ ಜೀವನಾಧ
ಕಳೆದುಕೊಂಡವರಿಗೆ ಸೂಕ್ತ ಸೌಲಭ್ಯವನ್ನು ಒದಗಿಸಲಾಯಿತು.

1983ರಲ್ಲಿ ಅಸ್ಸಾಮಿನ ಸುಮಾರು 400 ಹಳ್ಳಿಗಳಲ್ಲಿ ವ್ಯಾಪಿಸಿದ ಭಯಾ
ಗಲಭೆಗಳಿಂದ ಸಂಕಷ್ಟಕ್ಕೀಡಾದ ಸಹೋದರರಿಗಾಗಿ ಜಮಾಅತೆ ಇಸ್ಲಾಮಿಯು 40 
ರೂಪಾಯಿಗಳ ಪರಿಹಾರ ಕಾರ್ಯವನ್ನು ನಡೆಸಿತು. ಅಲ್ಲಿ 3 ವರ್ಷಗಳ ಸುದೀರ್ಘ ಸೇ
ಕಾರ್ಯಗಳನ್ನು ನಿರ್ವಹಿಸಬೇಕಾಯಿತು. ದೆಹಲಿ, ಉತ್ತರ ಪ್ರದೇಶ, ಪಶ್ಚಿಮ ಬಂಗಾಳ, ಆ
ಮತ್ತು ಕರ್ನಾಟಕ ರಾಜ್ಯಗಳ ಅನೇಕ ಕಾರ್ಯಕರ್ತರು ಅಸ್ಸಾಮಿನ ಪರಿಹಾರ ಕಾರ್ಯಗಳ
ಸಕ್ರಿಯವಾಗಿ ಭಾಗವಹಿಸಿದ್ದರು. ನಿರ್ಗತಿಕರ ಪುನರ್‌ವಸತಿ ಮತ್ತು ಅನಾಥ ಮಕ್ಕಳ ಶಿಕ್ಷ
ವಿಶೇಷ ಗಮನ ನೀಡಲಾಯಿತು. ನಿರಾಶ್ರಿತರಿಗೆ ಉದ್ಯೋಗ ತರಬೇತಿ ನೀಡಲಾಯಿತು. ಅಂ
ಕಳೆದು ಕೊಂಡವರಿಗೆ ಅವುಗಳನ್ನು ಪುನರ್‌ನಿರ್ಮಿಸಿ ಕೊಡಲಾಯಿತು.

1987ರಲ್ಲಿ ಮೀರತ್‌ನಲ್ಲಿ ನಡೆದ ಗಲಭೆಗಳಲ್ಲಿ ಸುಮಾರು ನಾನೂರು ನಿರಪರಾಧಿ

ಲೆಯಾದರು. 500ಕ್ಕೂ ಮಿಕ್ಕಿ ಗಂಭೀರ ಗಾಯಾಳುಗಳಾದರು. ಸಾವಿರಾರು ಮಕ್ಕಳು ಾಥರಾದರು. ನೂರಾರು ಸ್ತ್ರೀಯರು ವಿಧವೆಯಾದರು. ಆ ಗಲಭೆ ಪೀಡಿತರ ನೆರವಿಗಾಗಿ ಮಾಅತೆ ಇಸ್ಲಾಮಿಯು 70 ಲಕ್ಷ ರೂಪಾಯಿಗಳ ಪರಿಹಾರ ಕಾರ್ಯಗಳನ್ನು ನಿರ್ವಹಿಸಿತು. ಸ್ಸಾಮ್‌ನ ನೆಲ್ಲಿಯಲ್ಲಿ ಹತ್ಯಾಕಾಂಡಕ್ಕೆ ಬಲಿಯಾದವರ ಕುಟುಂಬಗಳಿಗೆ ನೆರವಾಗುವ ಷಯದಲ್ಲಿಯೂ ಜಮಾಅತೆ ಇಸ್ಲಾಮಿ ಸಕ್ರಿಯ ಪಾತ್ರ ವಹಿಸಿದೆ. ಜಾತಿ-ಮತ ಭೇದವಿಲ್ಲದೆ ಭೇ ಪೀಡಿತರ ನೆರವಿಗಾಗಿ ಆಂದೋಲನವು ಇತರರ ಸಹಕಾರದಿಂದ ಗರಿಷ್ಠ ಪ್ರಯತ್ನಿಸಿತ್ತು.

1989ರಲ್ಲಿ ಭಾಗಲ್ಪುರದಲ್ಲಿ ನಡೆದ ಭೀಕರ ಗಲಭೆಗಳಲ್ಲಿ ಸುಮಾರು ಸಾವಿರಕ್ಕೂ ಷ್ಟು ಜನರು ಕ್ರೂರವಾಗಿ ಕೊಲ್ಲಲ್ಪಟ್ಟರು. ಮೂರು ವಿಭಾಗಗಳಲ್ಲಿ ಜಮಾಅತೆ ಇಸ್ಲಾಮಿಯು ಸಿದ ವ್ಯಾಪಕ ಪರಿಹಾರ ಕಾರ್ಯಗಳಿಗಾಗಿ ಐದು ಕೋಟಿ ರೂಪಾಯಿ ವ್ಯಯಿಸಲಾಗಿತ್ತು. ತ್ತು ಕುಟುಂಬಗಳಿಗೆ ಪುನರ್ವಸತಿ ಏರ್ಪಡಿಸಿ ನೂರು ಮಂದಿ ಅನಾಥ ಮಕ್ಕಳನ್ನು ದತ್ತು ಕರಿಸಲಾಗಿತ್ತು.

## ಸರ್ಗಿಕ ದುರಂತಗಳಲ್ಲಿ

1977ರಲ್ಲಿ ಆಂಧ್ರದಲ್ಲಿ ಬೀಸಿದ ಚಂಡಮಾರುತದಿಂದ ಅನೇಕ ಹಳ್ಳಿಗಳು ಮಾವಶೇಷವಾಗಿದ್ದಾಗ ಜಮಾಅತೆ ಇಸ್ಲಾಮಿ 12.5 ಲಕ್ಷ ರೂಪಾಯಿಗಳ ಪರಿಹಾರ ರ್ಯ ನಡೆಸಿತ್ತು. ಜಮಾಅತೆ ಇಸ್ಲಾಮಿಯು ಜಾತಿಮತ ಭೇದವಿಲ್ಲದೆ ನೆರವು ಒದಗಿಸಿತ್ತು. ಮ ಪುನರ್ವಸತಿಗಾಗಿ ವಹಿಸಿಕೊಂಡ ಗ್ರಾಮಗಳಲ್ಲಿ 165 ಹರಿಜನ ಕುಟುಂಬವಿದ್ದ ಕೋಗ್ರಾಡಿ ಮತ್ತು 824 ಹರಿಜನ ಕುಟುಂಬಗಳಿದ್ದ ಲಿಂಗರೆಡ್ಡಿ ಪಾಳ್ಯವೂ ಸೇರಿದ್ದುವು.

1969ರಲ್ಲಿ ಬಿಹಾರದಲ್ಲಿ ಸಂಭವಿಸಿದ ಭೀಕರ ಬರಗಾಲದಿಂದ ಸಂಕಷ್ಟಕ್ಕೀಡಾದ ಂದಿಯ ನೆರವಿಗಾಗಿ 3.5 ಲಕ್ಷ ರೂಪಾಯಿ ವ್ಯಯಿಸಿತ್ತು. 1923ರಲ್ಲಿ ಕರ್ನಾಟಕದಲ್ಲಿ ಾರ ಕ್ಷಾಮ ಪೀಡಿತರಾದವರಿಗೆ ನೀಡಿದ ನೆರವಿನಲ್ಲಿಯೂ ಸಕ್ರಿಯ ಪಾತ್ರ ವಹಿಸಿತ್ತು.

ಭಾರತದಲ್ಲಿ ನೈಸರ್ಗಿಕ ದುರಂತ ಸಂಭವಿಸಿದ ಎಲ್ಲ ಕಡೆಗಳಲ್ಲಿಯೂ ಜಮಾಅತೆ ಸ್ಲಾಮಿಯು ಸಾಧ್ಯವಿರುವಷ್ಟು ಪರಿಹಾರ ಕಾರ್ಯಗಳನ್ನು ನಡೆಸಿದೆ. ಮಹಾರಾಷ್ಟ್ರದಲ್ಲಿ ಕರ ಭೂಕಂಪವುಂಟಾದಾಗ ಜಮಾಅತೆ ಇಸ್ಲಾಮಿಯು ನಿಷೇಧಿಸಲಾಗಿದ್ದ ಸ್ಥಿತಿಯಲ್ಲಿಯೂ ಹಾರ ಕಾರ್ಯಗಳಲ್ಲಿ ಗಮನಾರ್ಹ ಪಾತ್ರ ವಹಿಸಿತ್ತು. ಭಾರತದ ನಾನಾ ಕಡೆಗಳಿಂದ ಮಿಸಿದ ಕಾರ್ಯಕರ್ತರು ಲಾತೂರ್ ಮತ್ತು ಕಿಲಾರಿಗಳಲ್ಲಿ ಸೇವೆ ಸಲ್ಲಿಸಿದ್ದರು.

ಹೀಗೆ ನೆರೆ ಪ್ರಕೋಪ, ಬರಗಾಲ, ಭೂಕಂಪ, ಬಿರುಗಾಳಿಯಂತಹ ನೈಸಗಿ ದುರಂತಗಳಿಗೆ ಗುರಿಯಾದವರಿಗೆ ನೆರವಾಗಿ, ಸಂತ್ರಪ್ತರಿಗೆ ಸಂರಕ್ಷಣೆ ನೀಡುವ ಕಾಯ ಜಮಾಅತೆ ಇಸ್ಲಾಮಿಯು ಆದ್ಯತೆ ನೀಡುವ ಸೇವಾ ಚಟುವಟಿಕೆಗಳಾಗಿವೆ.

ಇಂತಹ ಸೇವಾ ಚಟುವಟಿಕೆಗಳನ್ನು ಜಮಾಅತೆ ಇಸ್ಲಾಮಿಯು ತನ್ನ ಔದಾರ್ಯವೆ ಪರಿಗಣಿಸುವುದಿಲ್ಲ. ಬದಲಾಗಿ ಕರ್ತವ್ಯವೆಂದು ಭಾವಿಸುತ್ತದೆ. ಅದರಿಂದ ಯಾವುದೇ ಲೌ ಲಾಭವನ್ನು ನಿರೀಕ್ಷಿಸುವುದಿಲ್ಲ. ರಾಜಕೀಯ ಅಥವಾ ಇನ್ನಾವುದೇ ಲೌಕಿಕ ಹಿತಾಸಕ್ತಿಯಿ ದಿರುವುದರಿಂದ ಇಂತಹ ಸೇವಾ ಕಾರ್ಯಗಳಿಗೆ ವಿಶೇಷ ಪ್ರಚಾರ ನೀಡುವುದಿ ಸಂಕಷ್ಟದಲ್ಲಿರುವವರಿಗೆ ಮೌನವಾಗಿ ನೆರವು ನೀಡುವ ಇಸ್ಲಾಮೀ ಹೊಣೆಯನ್ನಷ್ಟೇ ಜಮಾ ನಿರ್ವಹಿಸುತ್ತಿದೆ.

